# ಸಿದ್ಧಗಂಗಾ


ಸಂಪುಟ 32 ಸಂಚಿಕೆ 8 ಆಗಸ್ಟ್ 1996


## ಶ್ರೀ ಸಿದ್ಧಗಂಗಾಗುರುಕರುಣ ತ್ರಿವಿಧಿ

"ಶಿವಭಾವ ಶಿವಬುದ್ಧಿ ಶಿವಹೃದಯು" ಶ್ರೀಗುರುವೆ
ದಿವ್ಯಲೋಕದ ನಗುವ ಚೆಲ್ಲುತಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

"ಜಗದಗಲ ಹರವಿರುವ ಕತ್ತಲೆಯು" ಮೊತ್ತವನು
ಹಗಲಿರುಳು ತೆಗೆದಿರುವೆ ಶ್ರೀಗುರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಶರಣರ ಅನುಭಾವ ಪರಮ ಪಾವನವೆಂದೆ
ಗುರುತಂದೆಯನು ಭಾವ ಶಿವನೆಂದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥



❀ ಹೆಚ್. ವಿ. ವೀರಭದ್ರಯ್ಯ

# ಶ್ರೀ ವಾಣಿ

### ಯೋಗಕ್ಷೇಮ

"ಅಪ್ರಾಪ್ತಸ್ಯ ಪ್ರಾಪಣಂ ಪ್ರಾಪ್ತಸ್ಯ ರಕ್ಷಣಂ."

"ಯೋಗ" ಶಬ್ದಕ್ಕೆ ಅನೇಕ ಅರ್ಥಗಳಿವೆ. ಅವುಗಳಲ್ಲಿ ಲಭ್ಯವಿಲ್ಲದ್ದನ್ನು ಪಡೆದುಕೊಳ್ಳುವುದು ಎಂಬುದೂ ಒಂದರ್ಥ. ಅಂತೆಯೇ "ಕ್ಷೇಮ" ಎಂಬುದಕ್ಕೂ ಹಲವು ಅರ್ಥಗಳುಂಟು. ಪಡೆದದ್ದನ್ನು ಕಾಪಾಡಿಕೊಳ್ಳುವುದು ಎಂಬ ಅರ್ಥವೂ ಇದೆ. ವಿದ್ಯಾರ್ಥಿಗಳಾದ ನೀವು ಪಡೆದುಕೊಳ್ಳಬೇಕಾದುದು ಬಹಳವಿದೆ. ತಂದೆ-ತಾಯಿಗಳು ನಿಮಗೆ ದೊರಕಿಸಿಕೊಡುವ ಅವಕಾಶ, ಸೌಲಭ್ಯ, ಸೌಕರ್ಯಗಳನ್ನು ಸಾರ್ಥಕಪಡಿಸಿಕೊಳ್ಳಬೇಕು. ಅದರ ಜೊತೆಗೆ ಲಭ್ಯವಾದೆಲ್ಲವನ್ನು ಸಂರಕ್ಷಿಸಿಕೊಳ್ಳಬೇಕು.

ನಮ್ಮವರು ನಮಗೆ ಅಲಭ್ಯವಾಗಿದ್ದ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಅದಕ್ಕಾಗಿ ಸುದೀರ್ಘ ಹೋರಾಟ ಮಾಡಿದರು. ಹುತಾತ್ಮರಾದರು. ದೇಶಕ್ಕಾಗಿ ಪ್ರಾಣಾರ್ಪಣೆಮಾಡಿದರು. ಸ್ವಾತಂತ್ರ್ಯದ ಅರ್ಥ ಅವರಿಗೆ ಪರಮೋಚ್ಚವೆನಿಸಿತ್ತು. ವೈಯಕ್ತಿಕಲಾಭಕ್ಕಾಗಿ ಅಲ್ಲ ರಾಷ್ಟ್ರಕಲ್ಯಾಣಕ್ಕಾಗಿ. ವೈಯಕ್ತಿಕ ಕಲ್ಯಾಣವನ್ನು ಜನ ಕಲ್ಯಾಣದಲ್ಲಿ ಕಂಡುಕೊಂಡರು. ಸರಳ ಜೀವನ, ಉನ್ನತ ಚಿಂತನ ಅವರದಾಗಿತ್ತು. ದೇಶಕ್ಕಾಗಿ ತಾವು ಎಂದು ನಂಬಿ ನಡೆದರು. ಸ್ವಾಭಿಮಾನ, ಸ್ವಾವಲಂಬನೆಯ ಮಾರ್ಗದಲ್ಲಿ ಹೆಜ್ಜೆ ಹಾಕಿದರು. ಆದರೆ ಇಂದೇನಾಗಿದೆ? ಹಿರಿಯರು ತಂದುಕೊಟ್ಟ ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಂಡು ಹೋಗುತ್ತೇವೆಯೇ ? ಎಂಬುದೇ ಸಂಶಯಾಸ್ಪದವಾಗಿದೆ. ಬಹುಪಾಲು ಜನನಾಯಕರು ಸ್ವಾರ್ಥದೀಕ್ಷಿತರಾಗಿದ್ದಾರೆ, ದೇಶಕ್ಕಿಂತ ಪಕ್ಷನಿಷ್ಠರಾಗಿದ್ದಾರೆ ಪ್ರಜಾರಾಜ್ಯವನ್ನು ಅಪಮಾರ್ಗದಲ್ಲಿ ನಡೆಸಲು ಹೊರಟಿದ್ದಾರೆ. ಇದು ಪ್ರಜಾಪ್ರಭುತ್ವದ ಅಣಕವಾಗಿದೆ. ಯೋಗಕ್ಷೇಮದ ವ್ಯಂಗ್ಯವೆನಿಸಿದೆ.

ರಾಷ್ಟ್ರದ ಭಾವಿ ಜನಾಂಗವಾದ ನೀವು ಜಾಗೃತರಾಗಬೇಕು. ವಿಚಾರದ ಬೆಳಕಿನಲ್ಲಿ ಹೆಜ್ಜೆಯಿಡಬೇಕು. ಪ್ರಾಪ್ತವಾದುದನ್ನು ಜವಾಬ್ದಾರಿಯಿಂದ ಕಾಪಾಡಿಕೊಂಡು ಬರುವವರಾಗಬೇಕು. ಸ್ವಾತಂತ್ರ್ಯವೆಂದರೆ ಸ್ವಚ್ಛಂದ ಪ್ರವೃತ್ತಿಯಲ್ಲ. ನಿಯಮಗಳ ಪರಿಪಾಲನೆ.

[31-7-96ರ ಪ್ರಾರ್ಥನಾಸಭೆಯ ಆಶೀರ್ವಚನದಿಂದ ಸಂಗ್ರಹ]

## ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ-572104.

**: ಮನವಿ :**

- ಈಗಾಗಲೇ ಪ್ರಕಟಿಸಿರುವಂತೆ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ವಜ್ರಮಹೋತ್ಸವವು 97 ಫೆಬ್ರವರಿಯಲ್ಲಿ ಆಚರಿಸಲು ನಿರ್ಧರಿಸಿ ಮುಂದೂಡಿದೆ.
- ಹಳೆಯ ವಿದ್ಯಾರ್ಥಿಗಳು ವಜ್ರಮಹೋತ್ಸವ ನಿಧಿಗೆ ತಮ್ಮ ವಂತಿಕೆಯನ್ನು ಸಂದಾಯ ಮಾಡಲು ಕಾಲಾವಕಾಶವಿದೆ.
- ವಂತಿಕೆಗಳನ್ನು ಭಾಗಶಃ ಮತ್ತು ಪೂರ್ಣವಾಗಿ ಸಂದಾಯ ಮಾಡದೆ ಇರುವವರು ದಯಮಾಡಿ ಒಂದು ತಿಂಗಳ ವೇತನಕ್ಕೆ ಅನುಗುಣವಾಗಿ ಸಲ್ಲಿಸಲು ಕೋರುತ್ತೇವೆ.
- ವಂತಿಕೆಗಳನ್ನು ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಹೆಸರಿನಲ್ಲಿ ಡಿ.ಡಿ. ಮೂಲಕ ಪಡೆದು ಕಳುಹಿಸಿಕೊಡಿ.
- ಸಂದಾಯವಾದ ಮೊತ್ತಕ್ಕೆ ಅನುಸಾರವಾಗಿ ಶ್ರೀ ಶ್ರೀಗಳ ಚಿತ್ರವಿರುವ ವಿಶೇಷರಸೀತಿ ರವಾನಿಸಲಾಗುವುದು.

ಬನ್ನಿ 'ಸಿದ್ಧಗಂಗಾ' ಸೇವಾ ಸಾಗರದಲ್ಲಿ ಪಾಲ್ಗೊಳ್ಳಿ! ಕೃತಜ್ಞತೆಯಿಂದ ಸ್ಮರಿಸಿ ಉಪಕರಿಸಿ

ಡಾ. ಎಂ. ಎನ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿಗಳು.

---

**: ಗಮನಿಸಿ :** ಧರ್ಮ, ಸಾಹಿತ್ಯ ಮತ್ತು ವೈಚಾರಿಕತೆಗೆ ಮೀಸಲಾದ 32 ವರ್ಷಗಳಿಂದ ಪ್ರಕಟವಾಗುತ್ತಿರುವ

**"ಸಿದ್ಧಗಂಗಾ" ಮಾಸಪತ್ರಿಕೆಗೆ ಸದಸ್ಯರಾಗಲು**

**ವಾರ್ಷಿಕ ಚಂದಾ : 35/- ರೂ.**

**ಆಜೀವ ಸದಸ್ಯತ್ವ ಚಂದಾ : 500/- ರೂ.**

ಚಂದಾವನ್ನು ಎಂ.ಓ./ಡಿ.ಡಿ. ಮೂಲಕ ಸಿದ್ಧಗಂಗಾ ಮಾಸ ಪತ್ರಿಕೆ ಹೆಸರಿನಲ್ಲಿ ಕಳುಹಿಸಿ.

ವಿ.ಸೂ. ಆಜೀವ ಸದಸ್ಯರಾದರೆ "**ಸಿದ್ಧಗಂಗಾ**" ನಿರಂತರವಾಗಿ ಕೈಸೇರುತ್ತದೆ.

ಪ್ರಕಾಶಕರು
"ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ, ತುಮಕೂರು–572104.

---

ಮಾನ್ಯ ಓದುಗರಲ್ಲಿ ವಿನಂತಿ "ಸಿದ್ಧಗಂಗಾ" ತಪ್ಪದೆ ನಿಮ್ಮ ಕೈ ಸೇರಬೇಕಾದರೆ ನಿಮ್ಮ ವಿಳಾಸ ಬದಲಾವಣೆಯಾದ ಕೂಡಲೆ ಚಂದಾ ಸಂಖ್ಯೆ LM................ ಸೂಚಿಸಿ ನಮ್ಮ ಕಾರ್ಯಾಲಯಕ್ಕೆ ಪತ್ರ ಬರೆಯಿರಿ.

ಪ್ರಕಾಶಕರು.
ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ, ತುಮಕೂರು–572104.

## ಶ್ರೀ ಸಿದ್ಧಲಿಂಗೇಶ್ವರ ವಚನ



ನದಿವಾಸಿಗಳು, ವನವಾಸಿಗಳು, ಗಿರಿವಾಸಿಗಳು ಗುಹೆವಾಸಿಗಳು,
ಇಂದ್ರಿಯಂಗಳಿಗಂಜಿ ಕಂದಮೂಲಂಗಳ ಭಕ್ಷಿಸುವ ಕಾನನದ ಮೃಗಗಳೆಲ್ಲ
ಲಿಂಗಪ್ರಾಣಿಗಳಿಗೆ ಪ್ರಾಣಲಿಂಗ ಸಂಬಂಧಿಗಳಾದ ಪರಶಿವಯೋಗಿಗಳಿಗೆಸರಿಯೆ? ಈ ಭ್ರಾಂತರೆಲ್ಲಾ
ಇದು ಕಾರಣ ನಿಮ್ಮ ಶರಣರು
ಅಂಗ ಪ್ರಾಣ ಇಂದ್ರಿಯಂಗಳೆಲ್ಲವು ಲಿಂಗ ನಿವಾಸಿಗಳಾಗಿ
ಲಿಂಗದೊಳಡಗಿದ ಲಿಂಗಗ್ರಾಹಕರು ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ।

ದೇವರು ದಯಪಾಲಿಸಿದ ಶರೀರ ಹಾಗೂ ಇಂದ್ರಿಯಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುವಲ್ಲಿ ಮಾಡುವ ಪ್ರಮಾದದಿಂದಲೇ ಮನುಷ್ಯ ದುಃಖವನ್ನನುಭವಿಸಬೇಕಾಗುವುದು. ಇಂದ್ರಿಯಗಳು ವಿಷಯದತ್ತ ಓಡಿ, ನಮ್ಮನ್ನು ಹಾಳು ಮಾಡುತ್ತವೆಂಬ ತಿಳುವಳಿಕೆಯಿಂದ ಕೆಲವರು ನದಿ, ವನ, ಗಿರಿ, ಗವಿ ಮೊದಲಾದವುಗಳಲ್ಲಿ ಸೇರಿಕೊಂಡು ಕಂದಮೂಲಾದಿಗಳನ್ನು ತಿನ್ನುತ್ತಿರುವರು. ವಿಚಾರಿಸಿ ನೋಡಿದರೆ ಅಂಥವರು ಹುಚ್ಚರೆಂದೇ ಹೇಳಬೇಕಾಗುವುದು.

ಇಂದ್ರಿಯಗಳನ್ನು ಬಲಾತ್ಕಾರದಿಂದ ನಿಗ್ರಹಿಸುವುದರಿಂದ ಅನರ್ಥವೇ ಸಂಭವಿಸುವುದು. ಅದಕ್ಕಾಗಿ ಅವನ್ನು ಲಿಂಗೇಂದ್ರಿಯಗಳ ರೂಪದಲ್ಲಿ ಪರಿವರ್ತನೆಗೊಳಿಸಿದರೆ ಸಾಕು ಅಂಥವರೆಲ್ಲ ಪ್ರತಿಯೊಂದು ವಿಷಯವನ್ನು ಲಿಂಗಪ್ರಸಾದ ರೂಪದಲ್ಲಿ ಭೋಗಿಸಿ ಆ ಲಿಂಗದಲ್ಲಿಯೇ ಒಂದಾಗಿ ಬಿಡುವರು.

(ಕೃಪೆ—ಷಟ್‌ಸ್ಥಲ ಜ್ಞಾನಸಾರಾಮೃತ-ಶ್ರೀ ತೋಂ.ಸಿ.ಕೈಂ.ಸೇ. ಸಂಘ-ಎಡೆಯೂರು-ಗದಗ)

## ಸಿದ್ಧಗಂಗಾ ಮಾಸ ಪತ್ರಿಕೆ

ಸಂಪಾದಕ ಮಂಡಳಿ

**ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು.

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

**ಎಂ. ರೇಣುಕಾರಾಧ್ಯ**
ಸಹ ಸಂಪಾದಕರು

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

* * *

**ಸಲಹಾ ಸಮಿತಿ**

ಡಾ|| ಎಂ. ಎಸ್. ಚನ್ನಬಸಪ್ಪ
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎಸ್. ಚಂದ್ರಶೇಖರಯ್ಯ

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**
ಮುದ್ರಕರು

* * *

**ಶ್ರೀಸಿದ್ಧಗಂಗಾಕ್ಷೇತ್ರ**
ಪ್ರಕಟಣೆಯ ಸ್ಥಳ

### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 32ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟ್ಯಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "
**' ಸಿದ್ಧಗಂಗಾ ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

## ಸಂಪಾದಕೀಯ

ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳತ್ತ ನಡೆದಿದೆ ರಾಷ್ಟ್ರರಥ. ಏನು ಉತ್ಸಾಹ! ಎಂಥ ಕನಸು ಕಂಡಿದ್ದೆವು! ಹಿರಿಯರು ಗಳಿಸಿಕೊಟ್ಟ ಮುಕ್ತಾವಕಾಶವನ್ನು ಹೇಗ ಬಳಸಿಕೊಂಡಿದ್ದೇವೆ. ತ್ಯಾಗ ದೇಶ ಪ್ರೇಮಗಳೆಲ್ಲ ಅದೆಷ್ಟು ಸವಕಲು ಪದಗಳಾಗಿವೆ? ಪ್ರಜಾಪ್ರಭುತ್ವ ಎಂಥ ಕ್ಲೀಷೆ ಗೊಳಗಾಗಿದೆ. ಜಗತ್ತಿನ ಬೃಹತ್ ಪ್ರಜಾಪ್ರಭುತ್ವ ಭಾರತ ಅದೆಂಥ ಮಹಾನ್ ಭಾರತವಾಗಬೇಕಿತ್ತು. ಆದರೀಗ ಏನಾಗುತ್ತಿದೆ. ಕವಿ ಗೋಪಾಲಕೃಷ್ಣ ಅಡಿಗರೆಂದಂತೆ "ಬೇರು ಸತ್ತೀಮರನ ಎತ್ತಿ ನಿಲ್ಲಿಸುವ" ಅಣಕ ನಡೆದಿದೆ. ಸ್ವಾತಂತ್ರ್ಯ ಬಂದ ಮೇಲೆ ಏನು ಪ್ರಗತಿ ಸಾಧಿಸಿದ್ದೇವೆ. ಅದೆಷ್ಟು ಸರ್ಕಾರಗಳು–ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರ ಬಂದು ಹೋದವು. ಯಾರ್‍ಯಾರ ಉದ್ಧಾರ ಎಷ್ಟೆಷ್ಟಾಗಿದೆ ? ಅಂಕಿ, ಸಂಖ್ಯೆಗಳ ಪದಕಗಳ ಜಾತ್ರೆ ನಡೆದಿದೆಯಷ್ಟೆ. ಯೋಜನೆಗಳ ಮೇಲೆ ಯೋಜನೆಗಳಾದವು. ಸಮಸ್ಯೆಗಳ ಸಮೃದ್ಧಿಯಾಗಿದೆ. ಭ್ರಷ್ಟಾಚಾರದ ಪಾರ್ಥೇನಿಯಂ ಎಲ್ಲೆಲ್ಲೂ ಹುಲುಸು. ಜನನಾಯಕರ ನೈತಿಕ ದಿವಾಳಿಯಿಂದಾಗಿ ಭಾರತೀಯ ತಲೆಎತ್ತಿ ಬಾಳುವಂತಿಲ್ಲ. ಎಷ್ಟೆಷ್ಟು ಹಗರಣಗಳು. ಗದ್ದುಗೆಯೇರಿದ ಪುಣ್ಯಾತ್ಮರ ಭಂಡ ಧೈರ್ಯಕ್ಕೆ ಹೇಳುವುದಾದರೂ ಏನು ? ಲೋಕಸಭೆ ವಿಧಾನ ಸಭೆಗಳ ಸಂಸ್ಕೃತಿ ಅದೆಷ್ಟು ಕೆಳಮಟ್ಟಕ್ಕೆ **ಇಳಿದಿದೆ** ಎಂಬುದನ್ನು ದೂರದರ್ಶನ ಜಗಜ್ಜಾಹೀರಗೊಳಿಸಿದೆ. ಪಕ್ಷಗಳ ಭರಾಟೆಯಲ್ಲಿ ದೇಶನಿಷ್ಠೆ ಗಾಳಿಗೆ ತೂರಿ ಹೋಗಿದೆ. ಅಗಲಿಹೋದ ದೇಶಭಕ್ತರು ಮತ್ತೆ ಬಂದದ್ದೇ ಆದರೆ ನಮ್ಮ ಭಾರತವೇ ಇದು ಎಂದು ದಿಗಿಲು ಬಿದ್ದಾರು! ರಾಷ್ಟ್ರ ಪ್ರಜ್ಞೆಯನ್ನು ಬಿತ್ತುವ ಯಾವ ಕೆಲಸವನ್ನೂ ಮಾಡಲಿಲ್ಲ. ಯುವ ಜನಾಂಗವಂತೂ ಅಂಧಕಾರದತ್ತ ಧಾವಿಸುತ್ತಿದೆ. ಜನನಾಯಕರ ಐಷಾರಾಮು ಜೀವನಕ್ಕೆ ಎಣೆಯಿಲ್ಲ. ನಿರುದ್ಯೋಗದ ತಾಂಡವ, ಪ್ರಜಾ ಸಂಖ್ಯೆಯ ಹೆಚ್ಚಳ, ಸಾಲದ ಹೊರೆ, ಎಲ್ಲಕ್ಕೂ ಮಿಗಿಲಾಗಿ ಸ್ವಾರ್ಥಬುದ್ಧಿ ದೇಶವನ್ನು ಕಿತ್ತು ತಿನ್ನುತ್ತಿವೆ. ಅಲ್ಪಶ್ರಮ ಅಧಿಕ ಲಾಭ ಪ್ರವೃತ್ತಿ ಮಿತಿಮೀರಿದೆ. ಸ್ವಾತಂತ್ರ್ಯ ದಿನಾಚರಣೆಯನ್ನು ಯಾವ ಮಟ್ಟಕ್ಕೆ ಇಳಿಸಿದ್ದೇವೆ. ಶಾಲಾ ಕಾಲೇಜುಗಳ ಯಾಂತ್ರಿಕ ಕಾರ್ಯಕ್ರಮವಾಗಿದೆ. ಉತ್ಸಾಹ, ಸಂಭ್ರಮ ವೆಲ್ಲಿದೆ ? ಭಾರತೀಯ ಕಳೆದು ಹೋಗಿದ್ದಾನೆ.

ಒಂದು ಸಹಸ್ರ ವರ್ಷಗಳು ಮೀರಿ ಸ್ವಾತಂತ್ರ್ಯ ಅಪಹರಣವಾಗಿ ಗುಲಾಮಗಿರಿಯಲ್ಲಿದ್ದ ಭಾರತ ವಿಮೋಚನೆ ಹೊಂದಿದ ಸ್ವಾತಂತ್ರ್ಯ ದಿನೋತ್ಸವವು ರಾಷ್ಟ್ರೀಯ ಹಬ್ಬವಾದರೂ ಆಚರಣೆ ವಿಸ್ತರಣೆ ವ್ಯಾಪ್ತಿ ಐದು ದಶಕಗಳಾದರೂ ಸೀಮಿತವಾಗಿದೆ. ಧಾರ್ಮಿಕ ಹಬ್ಬದ ಆಚರಣೆಗಳಂತೆ ಜನ ಸಾಮಾನ್ಯರು ಹಳ್ಳಿ ಪಟ್ಟಣಗಳಲ್ಲಿ ಆಚರಿಸುವ ಪ್ರಜ್ಞೆ ಮೂಡಿರಬೇಕು. ಈ ದಿಶೆಯಲ್ಲಿ ಜನ ಜಾಗೃತಿ ಉಂಟು ಮಾಡಲು ಸರ್ಕಾರ ಮತ್ತು ಶಿಕ್ಷಣ ಸಂಸ್ಥೆಗಳು ನಿರ್ದೇಶನ ನೀಡಿ ಮಾರ್ಗದರ್ಶನ ಮಾಡಬೇಕು.

ಈ ಕ್ರಮದಿಂದ ಜನತೆ ತ್ಯಾಗ, ಬಲಿದಾನದಿಂದ ದೊರೆತ ಸ್ವಾತಂತ್ರ್ಯ ಹಿರಿಮೆ ಮತ್ತು ಪವಿತ್ರತೆಯನ್ನು ತಿಳಿಯುವರು. ಇಂಥಹ ವಿನೂತನ ವ್ಯವಸ್ಥೆಯಿಂದ ಪ್ರಸ್ತುತ ತಲೆದೋರಿರುವ ರಾಷ್ಟ್ರೀಯ ಅಸಂಘಟಿತ ಚಟುವಟಿಕೆಗಳನ್ನು ತೊಡೆದು ಹಾಕಿ ಸ್ವಯಂ-ಪ್ರೇರಣೆಯಿಂದ ಜನತೆ ಏಕತೆ, ಭಾವೈಕ್ಯತೆ, ಭ್ರಾತೃತ್ವದಿಂದ ಬಾಳಿ ಬದುಕಲು ಸಾಧ್ಯವಾಗುತ್ತದೆ. ಇದರ ಪ್ರಭಾವದಿಂದ ಒಳ ಮತ್ತು ಹೊರ ಉಗ್ರಗಾಮಿಗಳ ಭಯೋತ್ಪಾದಕರ ಅಮಾನವೀಯ ಕೃತ್ಯಗಳು ನಿಂತು ಶಾಂತಿ ಲಭಿಸುದಿಲ್ಲವೆ.?

---



# ಶ್ರೀ ಅರವಿಂದರ ಮಾತಿನಲ್ಲಿ
## ಜ್ಞಾನ-ಕರ್ಮಯೋಗಗಳ ಸಮನ್ವಯ


ಎಂ. ಮಾಧವಪ್ಪ, 'ಶ್ರೀನಿವಾಸ' ಡಿ.ವಿ.ಎಸ್. ಹೈಸ್ಕೂಲ್ ಮೈದಾನ ಸಮೀಪ,
ವಿನೋಬ ನಗರ, ಶಿವಮೊಗ್ಗ–577201


---

ಲೋಕೇಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯನಘಾ
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್||
ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋऽಶ್ನುತೇ
ನಚ ಸಂನ್ಯಾಸನಾದೇವ ಸಿದ್ಧಿಂ ಸಮಧಿಗಚ್ಛತಿ ||
ಸಂನ್ಯಾಸ ಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ
ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋವಿಶಿಷ್ಯತೇ
ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿನ ಪಂಡಿತಾಃ
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ||
ಯತ್ ಸಾಂಖ್ಯೈಃ ಪ್ರಾಪ್ಯತೇಸ್ಥಾನಂ ತದ್ಯೋಗೈರಪಿ ಗಮ್ಯತೇ
ಏಕಂ ಸಾಂಖ್ಯಂ ಚಯೋಗಂಚಯಃ ಪಶ್ಯತಿಸಪಶ್ಯತಿ||

ಜ್ಞಾನ ಹಾಗೂ ಕರ್ಮಗಳೆರಡರ ಸಂಬಂಧದ ವಿಚಾರದಲ್ಲಿ ಭಗವದ್ಗಿತೇಯಲ್ಲಿ ಶ್ರೀ ಕೃಷ್ಣನು ತಿಳಿಯಪಡಿಸಿರುವ ಈ ಶ್ಲೋಕಗಳಲ್ಲಿ ವ್ಯಕ್ತ ಪಡಿಸಿದ ಅಭಿಪ್ರಾಯ ಈ ರೀತಿ ಇದೆ "ಬಹ್ಮರ್ಷಿಗಳ ಜ್ಞಾನಯೋಗ ಹಾಗೂ ರಾಜರ್ಷಿಗಳ ಕರ್ಮಯೋಗ ಎಂಬ ಎರಡು ತತ್ತ್ವಗಳು ಪುರಾತನ ಕಾಲದಲ್ಲಿ ನನ್ನಿಂದಲೇ ಹೇಳಲ್ಪಟ್ಟಿದೆ. ಜ್ಞಾನ-ಕರ್ಮಗಳೆರಡೂ ಆತ್ಮಸಾರ್ಥಕತೆಯನ್ನು ಉಂಟುಮಾಡುತ್ತವೆ. ಕರ್ಮಗಳನ್ನು ಆರಂಭಿಸದೆ ಇರುವುದರಿಂದ ಮನುಷ್ಯನು ನೈಷ್ಕರ್ಮ್ಯವನ್ನು ಹೊಂದುವುದಿಲ್ಲ ಮತ್ತು ಬರಿಯ ಕರ್ಮತ್ಯಾಗದಿಂದಲೇ ಸಿದ್ಧಿಯನ್ನು ಹೊಂದುವುದಿಲ್ಲ. ಆದರೂ ಆತ್ಮಕಲ್ಯಾಣ, ಲೋಕಕಲ್ಯಾಣಗಳೆರಡನ್ನು ಸಾಧಿಸಿ ಕೊಡುವುದರ ಮೂಲಕ ಕರ್ಮಯೋಗವು ಹೆಚ್ಚಿನದಾಗಿದೆ. ಜ್ಞಾನಕರ್ಮಯೋಗಗಳು ಭಿನ್ನ ಭಿನ್ನವಾದವುಗಳೆಂದು ಅವಿದ್ವಾಂಸರು ತಿಳಿದುಕೊಳ್ಳುತ್ತಾರೆ. ಆದರೆ ವಿದ್ವಾಂಸರು ಹಾಗೆ ತಿಳಿದುಕೊಳ್ಳುವುದಿಲ್ಲ. ಯಾವುದೊಂದು ಹಿಡಿದರೂ ಎರಡರ ಫಲವೂ ಲಭಿಸುತ್ತದೆ. ಜ್ಞಾನಯೋಗಿಗಳು ಪಡೆಯುವ ಸ್ಥಾನವನ್ನೇ ಕರ್ಮಯೋಗಿಗಳೂ ಪಡೆಯುತ್ತಾರೆ. ಜ್ಞಾನಕರ್ಮಯೋಗಗಳೆರಡನ್ನೂ ಒಂದೇ ಎಂದು ಯಾರು ಕಾಣುವರೋ ಅವರೆ ದಿವ್ಯ ದೃಷ್ಟಿಯುಳ್ಳ ನಿಜವಾದ ಜ್ಞಾನಿಗಳು"

ಈ ದಿವ್ಯ ವಾಕ್ಯಗಳನ್ನು ಗಮನಿಸಿದರೆ ಜ್ಞಾನಯೋಗವೇ ಬೇರೆ ಎಂದೆನ್ನುವಂಥ ಖಂಡ ವಿಚಾರಗಳೇ ಅಡಗಿ ಹೋಗುತ್ತವೆ. ಈ ವಿಚಾರವಾಗಿ ಶ್ರೀ ಅರವಿಂದರು ತಮ್ಮ ಗೀತಾ ಪ್ರಬಂಧದಲ್ಲಿ ಹೀಗೆ ವಿವರಿಸಿದ್ದಾರೆ. ಗೀತೆಯ ಬೋಧೆಯಲ್ಲಿ ಯೋಗ ಹಾಗೂ

ಜ್ಞಾನಗಳು ಆತ್ಮದ ಆರೋಹಣದಲ್ಲಿಯ ಎರಡು ಪಕ್ಕಗಳಿದ್ದಂತೆ ಇವೆ. ಆಶೆಯನ್ನು ಬಿಟ್ಟು ಆತ್ಮದಲ್ಲಿ ಸಮಭಾವವನ್ನು ತಾಳಿ, ಯಜ್ಞಗಳೆಂದು ತಿಳಿದು ಮಾಡುವ ಕರ್ಮಗಳಿಂದ ದೇವನೊಡನೆ ಒಂದಾಗುವುದೇ ಯೋಗ. ಜ್ಞಾನವು ಈ ಸಮತೆ, ಯಜ್ಞಶಕ್ತಿ ಆಶೆಯ ಅಭಾವಗಳ ಆಧಾರವಾಗಿದೆ. ಈ ಎರಡು ಪಕ್ಕಗಳು ಪರಸ್ಪರ ಸಹಕರಿಸುತ್ತವೆ. ಕನ್ನಡ ನಾಡಿನ ಶಿವಶರಣರು ಕೂಡ ಇದನ್ನು ಪ್ರತಿಪಾದಿಸಿದ್ದಾರೆಂಬುದನ್ನು "ಕ್ರಿಯೆಯೇ ಅಧಿಕವೆಂಬ ಗೊಡ್ಡಸಿದ್ಧಾಂತಿಗಳ ಮಾತು ಸೊಗಸದಯ್ಯಾ ಎನಗೆ, ಜ್ಞಾನವೇ ಅಧಿಕವೆಂಬ ದಡ್ಡವೇದಾಂತಿಗಳ ಮಾತು ಸೊಗಸದಯ್ಯಾ ಎನಗೆ ಅದೇನು ಕಾರಣವೆಂದೊಡೆ, ಆವುದಾನೊಂದು ಪಕ್ಷಿ ಉಭಯರೆಕ್ಕೆಯಿಂದ ಗಗನಕ್ಕೆ ಹಾರುವಂತೆ, ಅಂತರಂಗದಲ್ಲಿ ಸಮ್ಯಗ್ ಜ್ಞಾನ, ಬಹಿರಂಗದಲ್ಲಿ ಶಿವಸತ್ ಕ್ರಿಯಾಸನ್ನಿಹಿತವಿಲ್ಲದೆ ಪರವಸ್ತುವ ಕೂಡಬಾರದಾಗಿ. ಇದು ಕಾರಣ ಸತ್‌ಕ್ರಿಯಾ ಸಮ್ಯಗ್ ಜ್ಞಾನ ಸಂಪನ್ನರಾದ ಮಹಾಶರಣ ತೋರಿ ಬದುಕಿಸಯ್ಯಾ ಅಖಂಡೇಶ್ವರಾ"

"ಕಣ್ಣು ಕಾಲು ಎರಡುಳ್ಳವ ದೂರವನೆಯ್ದುವನಲ್ಲದೆ ಕಣ್ಣು ಕಾಲು ಎರಡರೊಳಗೊಂದಿಲ್ಲದವನು ದೂರವೆಯ್ದಲರಿಯನೆಂಬಂತೆ, ಜ್ಞಾನವಿರಹಿತನಾಗಿ ಕ್ರಿಯೆ ಏನೆಷ್ಟು ಮಾಡಿದಡೇನು, ಅದುಕಣ್ಣಿಲ್ಲದವನ ನಡತೆಯಂತೆ. ಕ್ರಿಯಾರಹಿತನಾಗಿ ಜ್ಞಾನಿಯಾದಡೇನು, ಅದು ಕಾಲಿಲ್ಲದವನ ಇರವಿನಂತೆ. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ನಿಜವ ಬೆರಸುವೊಡೆ ಜ್ಞಾನವೂ ಕ್ರಿಯೆಯೂ ಎರಡೂ ಬೇಕು.

ಎಂಬೀ ವಚನಗಳಿಂದ ಮನಗಾಣಬಹುದಾಗಿದೆ. ಈ ಎಲ್ಲ ಮಾತುಗಳಿಂದ ಕರ್ಮ ಮತ್ತು ಜ್ಞಾನ ಇವೆರಡೂ ಜೊತೆ ಜೊತೆಯಾಗಿ ಸಾಧಿಸಬೇಕಾದುದೆಂದು ಮನವರಿಕೆಯಾಗುತ್ತದೆ. ಏಕೆಂದರೆ ಸತ್ಕೃತಿಯೆಂಬುದೇ ಜ್ಞಾನ, ಜ್ಞಾನದೊಡಲೆ 'ಶ್ರೀ' ಎಂದೂ ಅಗ್ನಿಸುಡಲಲ್ಲದೆ ಸುಳಿಯಲರಿಯದು, ವಾಯುಸುಳಿವುದಲ್ಲದೆ ಸುಡಲರಿಯದು. ಆ ಅಗ್ನಿ ವಾಯು ಕೂಡಿದಲ್ಲದೆ ಅಡಿ ಇಡಲರಿಯದು. ಈ ಪರಿಯಂತೆ ನರರರಿವರೆ ಕ್ರಿಯಾ ಜ್ಞಾನ ಭೇದವ ರಾಮನಾಥಾ. ಇಂತು ಒಂದು ಮತ್ತೊಂದನ್ನು ಬಿಡದಿರುವ ರೀತಿಯಲ್ಲಿರುವ ಇವುಗಳಲ್ಲಿ ಯಾವವೊಂದನ್ನು ತ್ಯಜಿಸಿದರೂ ಪರಮ ಶಾಂತಿಯನ್ನು ಸಾಧಿಸುವುದು ಅಸಾಧ್ಯ. ಅನುಭವಗಳ ಸಲುವಾಗಿ ಕರ್ಮವನ್ನು ಅರ್ಥಾತ್ ಬಾಹ್ಯಿಕ ಪ್ರಜ್ಞೆಯನ್ನು ಅಲಕ್ಷಿಸಿ ಸಂಪೂರ್ಣವಾಗಿ ಅಂತರ್ಮುಖರಾಗುವುದೆಂದರೆ ತೂಕ ತಪ್ಪಿದವರೂ ಸಾಧನೆಯಲ್ಲಿ ಏಕದೇಶಿಯ ಸ್ಥಿತಿಗೆ ಮುಟ್ಟಿದವರೂ ಆದಂತೆಯೇ ಸರಿ. ಅದರಂತೆಯೇ ಕೇವಲ ಬಹಿರ್ಮುಖದಲ್ಲಿಯೇ ಧುಮುಕಿದರೆ ಅದರಿಂದಲೂ ನಾವು ಸಾಧನೆಯಲ್ಲಿ ತೂಕ ತಪ್ಪಿದವರೂ ಏಕದೇಶಿಯ ಸ್ಥಿತಿಗೆ ಮುಟ್ಟಿದವರೂ ಆಗುವೆವು. ಆದರೆ ನಾವು ಆಂತರಿಕ ಅನುಭವಹಾಗೂ ಬಾಹ್ಯಕರ್ಮ ಇವೆರಡರಲ್ಲಿಯೂ ಒಂದೇ ಪ್ರಜ್ಞೆಯುಳ್ಳವರಾಗಲಿಕ್ಕೆ ಬೇಕು ಹಾಗೂ ಇವೆರಡನ್ನು ಜಗನ್ಮಾತೆಯ ಸಾನ್ನಿಧ್ಯದಿಂದ ತುಂಬಿದವುಗಳನ್ನಾಗಿಯೇ ಮಾಡತಕ್ಕದ್ದು



ಎಂದಿದ್ದಾರೆ ಶ್ರೀ ಅರವಿಂದರು "ಕಣ್ಣು ಕಾಲು ಎರಡ್ಡುವ ದೂರವೆಯ್ದುವನಲ್ಲದೆ ಕಣ್ಣು ಕಾಲು ಎರಡರೊಳಗೊಂದಿಲ್ಲದವನು ದೂರವೆಯ್ದಲರಿಯನೆಂಬಂತೆ ಜ್ಞಾನವಿರಹಿತನಾಗಿ ಕ್ರಿಯೆ ಏನೆಷ್ಟು ಮಾಡಿದಡೇನು ಅದು ಕಣ್ಣಿಲ್ಲದವನ ನಡೆಯಂತೆ. ಕ್ರಿಯಾರಹಿತನಾಗಿ ಜ್ಞಾನಿಯಾದಡೇನು, ಅದು ಕಾಲಿಲ್ಲದ ಇರವಿನಂತೆ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವ ಬೆರಸುವೊಡೆ ಜ್ಞಾನವೂ ಕ್ರಿಯೆಯೂ ಎರಡೂ ಬೇಕು" ಎಂದು ವಚನಕಾರರು ಹೇಳಿದದುನ್ನು ಗಮನಕ್ಕೆ ತಂದುಕೊಳ್ಳಬಹುದು.

ಜ್ಞಾನವೆಂದರೆನು? ಯಾವುದು ಜ್ಞಾನ ಯೋಗ? ಕರ್ಮಯೋಗ ಏನು? ಇದನ್ನು ಗೀತಾ ಪ್ರಬಂಧದಲ್ಲಿ ಶ್ರೀ ಅರವಿಂದರು ಹೀಗೆ ತಿಳಿಯಪಡಿಸಿದ್ದಾರೆ. ದಿವ್ಯ ಸತ್ಯದ ದಿವ್ಯ ಪ್ರಭೆಯ ಬೆಳಕಿನಲ್ಲಿ ನಮ್ಮ ಸತ್ವವು ಪರಮ ಸ್ವರೂಪವನ್ನು ತಾಳುವುದೇ ಜ್ಞಾನವಾಗಿದೆ. ಜ್ಞಾನವೆಂದರೆ ಪರಮ ಏಕತ್ವದೊಡನೆ ಒಂದಾಗುವ ಪ್ರಜ್ಞೆ. ಆತ್ಮಜ್ಞಾನದ ಶಕ್ತಿಯಿಂದ ಹಾಗೂ ಆಧ್ಯಾತ್ಮಿಕ ಸಿದ್ಧಿಯ ಅನಿಮಿತ್ತ. ಆತ್ಮಾನಂದದಿಂದ ಮನಸ್ಸು ಪ್ರಾಣ-ದೇಹಗಳ ಕಾರ್ಯಗಳನ್ನು ನಿಯಂತ್ರಿಸುವುದೇ ಜ್ಞಾನಯೋಗ. ಜ್ಞಾನಯೋಗವೆಂದರೆ ಕರ್ಮಸಂನ್ಯಾಸವಲ್ಲ. ಸಮತೆ ಅನಾಸಕ್ತಿಗಳೇ ಜ್ಞಾನಯೋಗದ ಸಾಧನಗಳು ಹಾಗೆಯೇ ದಿವ್ಯಕರ್ಮಗಳನ್ನು ಮಾಡುತ್ತ ಉಚ್ಚಪ್ರಜ್ಞೆಯನ್ನು ಹೊಂದುವುದು ದಿವ್ಯ ಜನ್ಮವನ್ನು ತಾಳುವುದು ಮತ್ತು ಈ ಸಿದ್ಧಿಯಾದ ನಂತರವೂ ಈ ಸಿದ್ಧಿಯ ಪ್ರಕಟಣೆಯೊಂದೇ ದಿವ್ಯ ಕರ್ಮಗಳನ್ನು ಮುಂದುವರಿಸುವುದು ಕರ್ಮಯೋಗದ ಸಾರವಾಗಿದೆ. ಕರ್ಮದಲ್ಲಿ ಯಜ್ಞಭಾವ ಸಮಭಾವ ಹಾಗೂ ಆಶಾರಾಹಿತವು ಹೆಚ್ಚಿದಂತೆ ಜ್ಞಾನವು ಹೆಚ್ಚುವುದು. ಜ್ಞಾನವು ಹೆಚ್ಚಿದಂತೆ ಆತ್ಮವು ನಿಸ್ಪ್ರಹಯಜ್ಞಭಾವವುಳ್ಳ ಕರ್ಮಗಳಸಮತೆಯಲ್ಲಿ ಹೆಚ್ಚು ದೃಢವಾಗಿ ನೆಲೆಸುವುದು. ನಮ ಸತ್ವದ ಕೇಂದ್ರದ ಊರ್ಧ್ವಪಾತಇದರಿಂದ ಬರುವ ಬದಲಾವಣೆ ನಮ್ಮಇಡೀ ಅಸ್ತಿತ್ವ ಹಾಗೂ ಪ್ರಜ್ಞೆಯ ರೂಪಾಂತರ ಕರ್ಮದ ದೃಷ್ಟಿಕೋನ ಹಾಗೂಪ್ರೇರಣೆಗಳಲ್ಲಿಯ ಬದಲಾವಣೆ, ಇದುವೆ ಕರ್ಮಯೋಗದ ಸಾರ. ಈ ಹೇಳಿಕೆಗಳಿಂದ ಸ್ಪಷ್ಟವಾಗುವುದೇನೆಂದರೆ ಜ್ಞಾನ ಸಾಧನೆಯಲ್ಲಿ ಕರ್ಮದ ಪ್ರಾಧಾನ್ಯವಿದ್ದೇ ಇದೆ ಎಂಬುದು. ಆದರೆ ಆಧ್ಯಾತ್ಮಿಕ ಅನ್ವೇಷಿಗೆ ಕ್ರಿಯಾಕಲಾಪವು ಹೊರಗಿನದೆಂದು ಸಾರಿ ಹೇಳಿದುದುಂಟು. ಸಾಧಕನ ಒಂದೇ ಒಂದು ಗುರಿ ಎಂದರೆ ಭಗವಂತನನ್ನು ಪಡೆಯುವುದು. ಭಗವಂತನೊಡನೆ ಐಕ್ಯವಾಗುವುದು. ಇದರ ಉದ್ದೇಶ ಸಾಧನೆಗೆ ವಿಶೇಷವಾಗಿ ಪ್ರಜ್ಞೆಯನ್ನು ಕೆಳಮಟ್ಟಕ್ಕೆ ಇಳಿಸುವ ಕೆಲಸದಲ್ಲಿ ಶಕ್ತಿಯನ್ನು ಬಳಸಿದರೆ ಈ ಗುರಿ ತಪ್ಪುವುದು. ಏಕೆಂದರೆ ಪರಂಜ್ಯೋತಿಯತ್ತ ತಿರುಗಿ ನಿಶ್ಚಲಧ್ಯಾನಾಸಕ್ತ ಸ್ಥಾಯಿಯಲ್ಲಿ ನೆಲಸಿದ ಜೀವಿಯು ಆ ಸ್ಥಿತಿಯನ್ನು ತೊರೆದು ಜಗತ್ತಿನ ಯಾವುದೇಕಾರ್ಯದಲ್ಲಿ ಪ್ರವೇಶಿಸುವುದೆಂದರೆ ಅಜ್ಞಾನದ ಹಾಗೂ ನಿಮ್ಮ ಪ್ರಕೃತಿಯ ಸೀಮೆಯನ್ನು ಹೊಕ್ಕಂತೆಯೇ ಈ ಸೀಮೆಯಲ್ಲಿ ಕ್ರಿಯೆಯ ತರುವಾಯ ಪ್ರತಿಕ್ರಿಯೆ ಅನಿವಾರ್ಯ, ಪ್ರತಿಕ್ರಿಯೆಯು ಮತ್ತೊಂದು ಕ್ರಿಯೆಗೆ ಪೀಠಿಕೆಯಾಗುವುದು. ಒಂದು ಕರ್ಮಜಾಲವೇ ಏರ್ಪಡುವುದು.

ಜೀವನದಿಂದ ವಿಮುಕ್ತನಾಗುವ ಬದಲು ಸಾಧಕನು ಹೊಸದೊಂದು ಬಂಧನ ಪರಂಪರೆಯಲ್ಲಿ ಸಿಲುಕಿಕೊಳ್ಳುವನು. ಈ ಕಾರಣದಿಂದ ಭಗವಂತನನ್ನು ಅರಸುವವನು ಸಕಲ ಕಾರ್ಯಗಳಿಂದ ಹೊರಗುಳಿಯುವುದು ಅತ್ಯಗತ್ಯ. ಅನನ್ಯ ಧ್ಯಾನ ಹಾಗೂ ತಲ್ಲೀನತೆಗಳ ಮುಖಾಂತರ ಭಗವಂತನೊಡನೆ ಐಕ್ಯವನ್ನು ಪಡೆಯಲು ತಾನು ನಿವೇದಿಸಿಕೊಳ್ಳಬೇಕು ಎಂದು ಭಾವಿಸಲಾದ ಕಾಲವಿತ್ತು.

ಆದರೆ ಎಲ್ಲ ಕಾರ್ಯದಿಂದ ನಿವೃತ್ತನಾಗುವುದು ಯಾರಿಗಾದರೂ ಸಾಧ್ಯವೋ ? "ನಹಿಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ | ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿ ಜೈರ್ಗುಣೈ" ಎಂಬುದೇ ಇದಕ್ಕೆ ಉತ್ತರ ಅಂದರೆ ಉಸಿರು ಹೊತ್ತ ಯಾವ ಜೀವಿಗೂ ಕ್ರಿಯೆ ಸಲ್ಲಿಸದಿರಲಾಗುವುದಿಲ್ಲ ಎಂದು ಭಗವದ್ಗೀತೆಯು ಸಾರಿ ಹೇಳುತ್ತದೆ. ಈ ಸೃಷ್ಟಿಯಲ್ಲಿ ಎಂದೆಂದಿಗೂ ನಡೆಯುವ ವಿಶ್ವಕರ್ಮದಲ್ಲಿ ಪ್ರತಿಮಾನವನು ಕೇವಲ ಬದುಕಿರುವ ಸಂಗತಿಯಿಂದಲೇ ಪಾಲ್ಗೊಳ್ಳುತ್ತಾನೆ. ಇದು ಅವರಿಗೆ ತಿಳಿದಿರಬಹುದು. ವೈಯಕ್ತಿಕವಾಗಿ ಸಹ ತಾನು ವಿಚಾರಿಸುವಲ್ಲಿ, ಭಾವಿಸುವಲ್ಲಿ, ಉಸಿರಾಡುವಲ್ಲಿ ಕರ್ಮತರಂಗವೊಂದನ್ನು ಜಗತ್ತಿನೊಳಗೆ ಹರಿಬಿಡುವನು. ಈ ಅವಿರತ ಕರ್ಮನ್ಯಾಯುವು ಕೇವಲ ಸಜೀವ ಪ್ರಾಣಿಗಳಿಗೆ ಮಾತ್ರ ಅನ್ವಯಿಸುವುದಿಲ್ಲ. ನಿರ್ಜೀವ ವಸ್ತುಗಳೆಂದು ಕರೆಯಲಾದವುಗಳಿಗೂ ಅನ್ವಯಿಸುವುದು. ಶ್ರೀ ಅರವಿಂದರು ಹೇಳಿದಂತೆ, ದಡದ ಮೇಲೆ ಬಿದ್ದಿರುವ ಒಂದು ಕಲ್ಲು ಸಹ ವಿಶ್ವದ ಮೇಲೆ ತನ್ನ ಪ್ರಭಾವವನ್ನು ಬೀರುವುದು. ವಸ್ತು ಸಮಷ್ಟಿ ಯೋಜನೆಯಲ್ಲಿ ಆ ಕಲ್ಲಿನ ಅಸ್ತಿತ್ವವೂ ವ್ಯತ್ಯಯವನ್ನುಂಟು ಮಾಡುವುದು. ಅದೂ ಸಹ ಕ್ರಿಯೆ ಎಸಗುವುದು. ಕ್ರಿಯೆ ಅನಿವಾರ್ಯ. ಅದನ್ನು ತಪ್ಪಿಸಲು ಬರುವುದಿಲ್ಲ. ಅದರ ಯಾಂತ್ರಿಕ ಪರಿಣಾಮವನ್ನು ತಪ್ಪಿಸಬಹುದು. ಬಂಧನವನ್ನು ಕಲ್ಪಿಸುವ ಪರಿಣಾಮಗಳಿಗೆ ಕಾರ್ಯವನ್ನು ಉಪಯೋಗಿಸದೆ ವಿಮುಕ್ತತೆಯ ಸಲುವಾಗಿ ಅದನ್ನು ಉಪಯೋಗಿಸುವುದೇ ಕರ್ಮಮಾರ್ಗದ ಉಚ್ಚಕಲೆ ಹಾಗೂ ಘನವಿದ್ಯೆಯಾಗಿದೆ.

ಸಾಧಾರಣವಾಗಿ ಯಾವೊಂದು ಹೇತುವಿಲ್ಲದೆ ಯಾರೂ ಕಾರ್ಯಮಾಡುವುದಿಲ್ಲ. ಈ ಕ್ರಿಯೆಯಲ್ಲಿ ಕಾಮನೆ ಹಾಗೂ ಪ್ರೇರಕ ಅಹಂ ಅಡಗಿರುತ್ತದೆ. ಇವು ಬಂಧನದ ಸರಪಳಿಯ ಕೀಲುಗಳಾಗಿ ಪರಿಣಮಿಸುವುವು. ಆದರೆ ಯುಕ್ತ ಆಧ್ಯಾತ್ಮಿಕ ಸಾಧನೆಯಿಂದ ಈ ಎರಡು ದೋಷಕಾರಕ ಅಂಶಗಳನ್ನು ನಿರ್ಮೂಲ ಮಾಡಲು ಸಾಧ್ಯ. ಆವುಗಳ ಸ್ಥಾನದಲ್ಲಿ ಶುದ್ಧ ಹೇತುವನ್ನು ಅವಲಂಬಿಸಿ ಆ ಮೂಲಕ ಕ್ರಿಯೆಯನ್ನು ಕಳಂಕರಹಿತ ಮಾಡಬಹುದು. ಕ್ರಿಯೆಯನ್ನು ಮುಕ್ತಿ ಸಾಧನೆಗೆ ಉತ್ತಮೋಪಾಯವನ್ನಾಗಿ ಪರಿವರ್ತಿಸಬಹುದು. ಅಲ್ಲದೆ ಅತ್ಯುಚ್ಚ ಗುರಿಯನ್ನು ತಲುಪಲು ಸರ್ವರಿಗೆ ಒಂದೇ ಒಂದು ಸುಲಭೋಪಾಯವೆಂದರೆ ಕರ್ಮವೇ ಆಗಿದೆ.



ಪೂರ್ಣಯೋಗದ ಸಾಧನೆಯು ಅದೆಷ್ಟೋ ರೀತಿಯಲ್ಲಿ ಆರಂಭವಾಗಬಹುದು. ಆದರೆ ಭಗವಂತನಿಗೆ ಕರ್ಮಗಳ ಫಲವನ್ನು ಅರ್ಪಿಸುತ್ತ ಆರಂಭ ಮಾಡುವುದೇ ಬಹು ಪರಿಣಾಮಕಾರಿಯಾಗಿದೆ. ಏಕೆಂದರೆ ಜ್ಞಾನ ಮಾರ್ಗವನ್ನು ಅವಲಂಬಿಸಲು ಅಗತ್ಯವಾದ ಬುದ್ಧಿ ಸಂಸ್ಕಾರವುಳ್ಳವರು ಹಲವರು ಮಾತ್ರ. ಜ್ಞಾನಮಾರ್ಗದಲ್ಲಿ ಸತ್ಯವನ್ನು ಅಸತ್ಯದಿಂದ ಶಾಶ್ವತವನ್ನು ಕ್ಷಣದಿಂದ ಒಂದನ್ನು ಅನೇಕದಿಂದ ಅವಿರತವಾಗಿ ಬೇರ್ಪಡಿಸಿ ಜ್ಞಾನವು ಬೆಳೆದಂತೆ ಪ್ರಾಣಗತಿಯನ್ನು ಅದಕ್ಕೆ ಹೊಂದಿಸಬೇಕು. ಭಕ್ತಿಮಾರ್ಗದಲ್ಲಿ ಪರಿಣತ ಹೃದ್ಭಾವನಾ ಸತ್ತೆಯ ಉತ್ಕಟವಾದ ಭಗವದ್ಭಕ್ತಿಗೆ ಶರಣಗತರಾಗಿ ಆನಂದ ಲೋಕದತ್ತ ಏರಬಲ್ಲರೂ ಬಹಳ ಜನರಿಲ್ಲ. ಅಶುದ್ಧವಾದ ನಿಮ್ಮ ಪ್ರಕೃತಿಯು ಕಾಣಿಸಿಕೊಂಡು ಪ್ರೇಮಾನಂದಗಳ ಉತ್ಕಟತೆಯನ್ನು ತನ್ನ ಸ್ವತ್ತಾಗಿ ಮಾಡಿಕೊಂಡು ಬಿಡುವ ಅಪಾಯವೂ ಇದೆ. ಯಾರಲ್ಲಿ ಭಾವನಾಕೇಂದ್ರಗಳು ತೆರೆದು ಕಾರ್ಯದಲ್ಲಿ ಪ್ರವಹಿಸಲು ಇನ್ನೂ ಸಿದ್ಧವಿಲ್ಲವೋ ಅಂಥವರಿಗಾದರೂ ಭಕ್ತಿ ಮಾರ್ಗವು ಸಲ್ಲದು. ಆದರೆ ಕರ್ಮಮಾರ್ಗವಾದರೋ ಎಲ್ಲರಿಗೂ ತೆರೆದಿದೆ. ಏಕೆಂದರೆ ಕರ್ಮಮಾಡದವರು ಲೋಕದಲ್ಲಿ ಯಾರೂ ಇಲ್ಲ. ಅಗತ್ಯವೇನೆಂದರೆ ಯುಕ್ತ ಭಾವನೆಯಿಂದ ಕಾರ್ಯ ಮಾಡುವ ಇಚ್ಛೆ.

ಅಧ್ಯಾತ್ಮಯೋಗದ ತತ್ವ ಯಾವುದೆಂದರೆ ನಮಗೆ ಗೋಚರವಾದ ಅಥವಾ ಅಗೋಚರವಾಗಿದ್ದರೂ ನಮಗೆ ತಿಳಿದು ಬರುವ ಎಲ್ಲ ವಸ್ತುಗಳು, ಮಾನವರು ವಸ್ತುಗಳು, ನಾವು, ಸಂಗತಿಗಳು, ದೇವತೆಗಳು, ಅಸುರರು, ದೇವದೂತರು ಎಲ್ಲರೂ-ಏಕಮೇವಾದ್ವಿತೀಯವಾದ ಬ್ರಹ್ಮವೆಂದು ಜ್ಞಾನದಿಂದ ಸಾಕ್ಷಾತ್ಕಾರ ಪಡೆಯುವುದೇ ಆಗಿದೆ ಮತ್ತು ಕಾರ್ಯದಲ್ಲಿ ಮತ್ತು ಭಾವದಲ್ಲಿ ಪರಾತ್ಪರ ಪುರುಷನಿಗೆ ಸಂಪೂರ್ಣ ಆತ್ಮಸಮರ್ಪಣ ಮಾಡುವುದು ಎಂದು ಯೋಗ ಮತ್ತು ಅದರ ಉದ್ದೇಶಗಳು ಎಂಬ ಹೊತ್ತಿಗೆಯಲ್ಲಿ ಶ್ರೀ ಅರವಿಂದರು ತಿಳಿಸುತ್ತ ಮುಂದೆ ಹೀಗೆ ವಿವರಿಸಿದ್ದಾರೆ–ಇದಕ್ಕಾಗಿ ಮೊತ್ತಮೊದಲ ವಿಧಾನವೆಂದರೆ ಆತ್ಮ ಸಮರ್ಪಣದ ಸಂಕಲ್ಪ ಮಾಡುವುದು. ಇದರಲ್ಲಿ ಶ್ರೀ ಕೃಷ್ಣನು ಗೀತೆಯಲ್ಲಿ "ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ| ನಿರಾಶೀರ್ನಿರ್ಮಮೋಭೂತ್ವಾ ಯುದ್ಧಸ್ವವಿಗತಜ್ವರಃ||" (2.20) ಎಂದು ಹೇಳಿದಂತೆ ಸರ್ವಕರ್ಮಗಳನ್ನೆಲ್ಲ ನನ್ನಲ್ಲಿ ಸಮರ್ಪಿಸಿ, ಆಧ್ಯಾತ್ಮ ಪ್ರಜ್ಞೆಯುಳ್ಳವನಾಗಿ, ನಿಸ್ವಾರ್ಥ ನಿರಹಂಕಾರಗಳಿಂದ ಕೂಡಿದವನಾಗಿ ಮನಸ್ಸಿನ ಜ್ವರಗಳನ್ನೆಲ್ಲ ಕಳೆದುಕೊಂಡು ಜೀವನ ಸಂಗ್ರಾಮದಲ್ಲಿ ಸರ್ವದಾ ಹೋರಾಡುವವನಾಗು ಎಂದು ಅರ್ಜುನನಿಗೆ ತಿಳಿಸಿದುದರಲ್ಲಿ ಕರ್ಮಯೋಗದ ಅಂಶಗಳೆಲ್ಲ ಅಡಕವಾಗಿವೆ. ಶ್ರೀ ಅರವಿಂದರು ತಿಳಿಸುತ್ತಾರೆ-"ಹೃತ್ಪೂರ್ವಕವಾಗಿ, ನಿಮ್ಮ ಕರ್ಮಶಕ್ತಿಯಿಂದೊಡಗೂಡಿ ನಿಮ್ಮನ್ನು ಪರಮಾತ್ಮನ ಕೈಯಲ್ಲಿ ಒಪ್ಪಿಸಿರಿ. ಯಾವ ಕರಾರನ್ನು ಹಾಕಬೇಡಿ ಏನನ್ನು ಬೇಡದಿರಿ. ಯೋಗದಲ್ಲಿ ಸಿದ್ಧಿ

ಯನ್ನು ಕೂಡ ಬೇಡದಿರಿ. ನಿಮ್ಮಲ್ಲಿ ಮತ್ತು ನಿಮ್ಮ ಮೂಲಕ ಅವನ ಸಂಕಲ್ಪವು ನೇರವಾಗಿ ನೆರವೇರ ಬೇಕೆಂಬುದನ್ನಲ್ಲದೆ ಮತ್ತೇನನ್ನೂ ಬೇಡಕೂಡದು. ಬೇಡಿದವರಿಗೆ ಬೇಡಿದ್ದನ್ನು ಭಗವಂತನು ಕೊಡುವನು. ಆದರೆ ಏನನ್ನೂ ಬೇಡದೆ ತಮ್ಮನ್ನೆ ಒಪ್ಪಿಸಿದವರಿಗೆ ಆತನು ಅವರು ಬೇಡಬಹುದಾದದ್ದನ್ನೆಲ್ಲವನ್ನು ಅವರಿಗೆ ಅವಶ್ಯಕವಾದದ್ದೆಲ್ಲವನ್ನು ನೀಡುವನಲ್ಲದೆ ತನ್ನನ್ನು ಮತ್ತು ತನ್ನ ಪ್ರೇಮದಿಂದ ತಾನಾಗಿಯೇ ದೊರೆಯುವ ವರಗಳನ್ನು ನೀಡುವನು. ಆದ್ದರಿಂದ ಆತ್ಮ ಸಮರ್ಪಣೆಗೆ ದೃಢವಾಗಿ ಅಂಟಿಕೊಂಡಿರಬೇಕು. ಆಂತರಿಕ ಅಥವಾ ಬಾಹ್ಯತೊಂದರೆಗಳಾದಾಗ ಭಗವದ್ಗೀತೆಯ ನುಡಿಗಳನ್ನು ನೆನಪಿಡಿರಿ. "ಮಚ್ಚಿತ್ತಃ ಸರ್ವದುಗಾಣಿ ಮತ್ಪ್ರಸಾದಾತ್ ತರಿಷ್ಯತಿ" ಹೃತ್ಪೂರ್ವಕವಾಗಿ ಮತ್ತು ಮನಃಪೂರ್ವಕವಾಗಿ ನಿನ್ನನ್ನು ನನಗೆ ಅರ್ಪಿಸಿದರೆ, ನನ್ನ ಕೃಪೆಯಿಂದ ನೀನು ಎಲ್ಲ ವಿಘ್ನಗಳನ್ನು ಗಂಡಾಂತರಗಳನ್ನು ದಾಟುವಿ ಮತ್ತು "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥" ಎಲ್ಲ ಧರ್ಮಗಳನ್ನು ಬಿಟ್ಟು ಕೇವಲ ನನಗೆ ಶರಣು ಬಾ, ಎಲ್ಲ ಪಾಪಗಳಿಂದಲೂ ನಿನ್ನನ್ನು ಮುಕ್ತಗೊಳಿಸುವೆನು, ದುಃಖ ಪಡಬೇಡ ಎಂಬ ನುಡಿಯನ್ನು ನೆನಪಿಡಿರಿ. ಜವಾಬ್ದಾರಿ ನಿಮ್ಮದೇ ಎನ್ನುವಂತೆ ಅಥವಾ ಪ್ರಯತ್ನಗಳ ಮೇಲೆಯೇ ಪರಿಣಾಮ ಅವಲಂಬಿಸಿದೆಯೋ ಎನ್ನುವಂತೆ ನಾವು ಚಡಪಡಿಸುವ ಅಥವಾ ಕೊರಗುವ ಕಾರಣವಿಲ್ಲ. ಅವನನ್ನ ಮಾತ್ರ ಗಟ್ಟಿಯಾಗಿ ಹಿಡಿದು ಕೊಳ್ಳಿರಿ "ಎಲ್ಲ ಪಾಪಗಳಿಂದಲೂ ನಿನ್ನನ್ನು ಮುಕ್ತಗೊಳಿಸುವೆನು" ಎಂಬ ವಚನವಿತ್ತಿದ್ದಿದೆಯಲ್ಲವೆ!

ಆತ್ಮ ಸಮರ್ಪಣದಲ್ಲಿ ಎಲ್ಲದರಲ್ಲಿಯೂ ಎಲ್ಲೆಲ್ಲಿಯೂ ಅಂದರೆ ಎಲ್ಲ ವಸ್ತುಗಳಲ್ಲಿ ಮತ್ತು ಜೀವಿಗಳಲ್ಲಿ ಕಾಣುವುದಷ್ಟೇ ಸಾಲದು, ಎಲ್ಲ ಘಟನೆಗಳಲ್ಲಿ, ಕೃತಿಗಳಲ್ಲಿ, ವಿಚಾರಗಳಲ್ಲಿ, ಭಾವನೆಗಳಲ್ಲಿ, ನಿಮ್ಮಲ್ಲಿ ಅನ್ಯರಲ್ಲಿ ಜಗದಲ್ಲೆಲ್ಲಾ ಅವನನ್ನು ಕಾಣತಕ್ಕದು. ಈ ಸಿದ್ಧಿಯನ್ನು ಪಡೆಯಬೇಕಾದರೆ ಎರಡು ಸಂಗತಿಗಳು ಅವಶ್ಯಕವಾಗಿದೆ. ಮೊದಲನೆಯದೆಂದರೆ ನೀವು ಎಲ್ಲ ಕಾರ್ಯಗಳ ಫಲವನ್ನು ಅವನಿಗೆ ಅರ್ಪಿಸಬೇಕು. ಎರಡನೆಯದೆಂದರೆ ನೀವು ಆ ಕಾರ್ಯಗಳನ್ನು ಸಹ ಅವನಿಗೆ ಅರ್ಪಿಸತಕ್ಕದ್ದು. ಕರ್ಮಫಲದ ಸಮರ್ಪಣೆಯೆಂದರೆ ಕರ್ಮಫಲದ ಬಗ್ಗೆ ವೈರಾಗ್ಯವಲ್ಲ. ಅದಕ್ಕೆ ವಿಮುಖರಾಗುವುದೂ ಅಲ್ಲ. ಅಥವಾ ಒಂದು ವಿಶಿಷ್ಟ ಗುರಿಯನ್ನು ಇಟ್ಟುಕೊಂಡು ಕಾರ್ಯ ಮಾಡಬಾರದೆಂದೇನೂ ಅಲ್ಲ. ಅದರ ಅರ್ಥವೇನೆಂದರೆ ಇಂಥದೇ ಸಂಗತಿಯು ಸಂಭವಿಸಬೇಕೆಂಬ ಬಯಕೆಯಿಂದ ಅಥವಾ ಇಂಥ ಘಟನೆಯು ಸಂಭವಿಸುವ ಅವಶ್ಯಕತೆ ಇದ್ದು ಅದಕ್ಕೆ ನಿಮ್ಮ ಕಾರ್ಯವು ಅವಶ್ಯವಿದೆಯೆಂದು ಯೋಚಿಸಿ ನೀವು ಕಾರ್ಯಪ್ರವೃತ್ತರಾಗುವುದಲ್ಲ. ಆದರೆ ಕರ್ತವ್ಯವೆಂದು ಭಾವಿಸಿ ನಿಮ್ಮ ಅಂತರ್ಯಾಮಿಯಾದ ಈಶ್ವರನ ಆದೇಶವೆಂದು ತಿಳಿದು, ದೇವರು ಯಾವುದೇ ಫಲವನ್ನು ಕೊಡಲಿ ನೀವು ಕಾರ್ಯ



ಮಾಡಬೇಕು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷುಕದಾಚನ" ಎಂದು ಹೇಳಿದೆಯಲ್ಲವೆ! ನೀವು ಕರ್ತವ್ಯಕರ್ಮವನ್ನು ಯೋಗ್ಯರೀತಿಯಿಂದ ಪೂರ್ಣಗೊಳಿಸಿದರೆ ನಿಮಗೆ ಸರಿಯೆನಿಸಿದ ಅಥವಾ ಅಪೇಕ್ಷಿಸಿದ ಪರಿಣಾಮವುಂಟಾಗದಿದ್ದರೂ ಯೋಗ್ಯ ಮತ್ತು ಆವಶ್ಯಕವಾದುದ್ದು ಖಂಡಿತ ಸಂಭವಿಸುವುದೆಂಬ ಮಾತಿನಲ್ಲಿ ದೃಢವಿಶ್ವಾಸವಿಡಿರಿ.

ಆದರೆ ಕರ್ತವ್ಯ ಕರ್ಮ ಯಾವುದು ? ಗಹನಾ ಕರ್ಮಣೋಗತಿಃ ಇದನ್ನು ಹೇಳುವುದು ಬಹಳ ಕಠಿಣ. ಬಹಳ ಜನರು ಕರ್ತವ್ಯ ಎಂಬುದನ್ನು Duty ಎಂಬ ಇಂಗ್ಲಿಷ್ ಶಬ್ದ ಮತ್ತು ಕಲ್ಪನೆಯಿಂದ ಅನುವಾದ ಮಾಡುವರು. ಅದರ ವಾಖ್ಯೆ ಮಾಡುವರು. ಅದರ ವಾಖ್ಯೆ ಮಾಡಲು ಕೇಳಿಕೊಂಡರೆ, ಅದು ಯೋಗ್ಯ ನೈತಿಕ ಕಾರ್ಯ, ಜನರು ಯಾವುದಕ್ಕೆ ಯೋಗ್ನ ಮತ್ತು ನೈತಿಕವೆಂದೆನ್ನುವರೋ, ನೀವು ಸ್ವತಃ ಯಾವುದು ಯೋಗ್ಯ ಮತ್ತು ನೈತಿಕವೆಂದು ಅಂತಃಕರಣ ಪೂರ್ವಕವಾಗಿ ತಿಳಿಯುವಿರೆ ಅಥವಾ ಸಮಾಜದ ರಾಷ್ಟ್ರದ ಅಥವಾ ಮಾನವತೆಯ ಕಲ್ಯಾಣಕ್ಕಾಗಿ ಯಾವುದು ಅವಶ್ಯಕವಿರವುದೋ ಅದೇ ಎಂದು ಹೇಳುವರು. ಆದರೆ ಅವನು ಈ ಯೋಗದ ಸಿದ್ಧಿಯನ್ನು ಎಂದಿಗೂ ಪಡೆಯಲಾರನು. ಕೇವಲ ಅವನಲ್ಲಿ ಒಂದು ತರದ ಫಲಾಪೇಕ್ಷೆಯ ಬದಲಾಗಿ ಮತ್ತೊಂದು ತರದ ಫಲಾಪೇಕ್ಷೆ ಬಂದಂತಾಗುವುದು. ಉಚ್ಚತರ ಪರಿಣಾಮಗಳಿಗಾಗಿ ಇನ್ನೂ ಹೆಚ್ಚು ಆವೇಶದಿಂದ ಅವನು ಪ್ರಯತ್ನಿಸುವನು ಮತ್ತು ಇವು ದೊರೆಯದಿದ್ದರೆ ಇನ್ನೂ ಹೆಚ್ಚು ದುಃಖಿತನಾಗುವನು. ಪರೋಪಕಾರಿಯ ಆವೇಶದಷ್ಟು ಭಯಂಕರವಾದ ಆವೇಶವು ಮತ್ತಾವುದೂ ಇಲ್ಲ. ಅವನು ತ್ರಿಗುಣಾತೀತನಾಗದೆ ತ್ರಿಗುಣಗಳಿಂದ ಯಾವಾಗಲೂ ಬಂಧಿತನಾಗುವನು.

ವೈಯಕ್ತಿಕ ಸದ್ಗುಣ ಮತ್ತು ಸಾಮಾಜಿಕ ಕರ್ತವ್ಯಗಳ ಬಗ್ಗೆ ಶ್ರೀಕೃಷ್ಣನು ಎರಡು ಬೇರೆ ಬೇರೆ ವಿಚಾರಗಳನ್ನು ಎದುರಿಗಿಡುತ್ತಾನೆ. ಒಂದು ಕೆಳಮಟ್ಟದ್ದು, ಮುಮುಕ್ಷುವಾದ ಬಂಧಿತ ಮಾನವನ ಉಪಯೋಗಕ್ಕಾಗಿದ್ದುದ್ದು; ಎರಡನೆಯದು ಉಚ್ಚಮಟ್ಟದ್ದು, ಜೀವನ್ಮುಕ್ತನಿಗಾಗಿ, ಮೊದಲನೆಯದು ಶಾಸ್ತ್ರ, ಎರಡನೆಯದು ಸಮರ್ಪಣ-ಕರ್ಮಫಲವನ್ನಷ್ಟೇ ಅಲ್ಲ, ಕರ್ಮವನ್ನು ಕೂಡ ಪರಮಾತ್ಮನಿಗೆ ಸಮರ್ಪಣ ಮಾಡುವುದು ಶಾಸ್ತ್ರ ನಮ್ಮ ಸ್ವಾರ್ಥ ಮತ್ತು ಸ್ವಚ್ಛಂದ ವೃತ್ತಿಯಿಂದ ದೂರವಿದ್ದಂಥ ಒಂದು ಜೀವನ ಮಟ್ಟವನ್ನು ಹಾಕಿಕೊಡುತ್ತದೆ. ಈ ಆದರ್ಶವನ್ನು ಅನುಸರಿಸಿ ಸರಿಯಾದ ಭಾವದಿಂದ ಜೀವನ ಸಾಗಿಸಿದರೆ ನಾವು ಆತ್ಮ ಸಂಮಯವನ್ನು ಸಾಧಿಸುವುದಲ್ಲದೆ, ಸಾತ್ವಿಕ ಅಹಂಕಾರವನ್ನು ಕನಿಷ್ಠ ಮಟ್ಟಕ್ಕೆ ಇಳಿಸಿ ಮುಕ್ತಿಗಾಗಿ ನಮ್ಮನ್ನು ಸಿದ್ಧಮಾಡಿಕೊಳ್ಳಬಲ್ಲೆವು. ಆದರೆ ಶ್ರೇಷ್ಠ ಶಾಸ್ತ್ರವನ್ನು ಕೂಡ ಅಹಂಕಾರಕ್ಕಾಗಿ--ಸಾತ್ವಿಕ ಅಹಂಕಾರ ಮತ್ತು ವೈಯಕ್ತಿಕ ಅಭಿಪ್ರಾಯದ ಅಹಂಕಾರಗಳಿಗಾಗಿ ದುರುಪಯೋಗ ಮಾಡಿಕೊಳ್ಳುವುದು ಸಾಧ್ಯವಿದೆ. ಅದರ ಅತ್ಯುತ್ತಮ ಸ್ವರೂಪವು ಮುಕ್ತಿಯ

ಸಿದ್ಧತೆಗಾಗಿ ಒಳ್ಳೆ ಸಾಧನವಾಗಿದೆ. ಅದು ಶಬ್ದ ಬ್ರಹ್ಮ. ಆದರೆ ನಾವು ಸಿದ್ಧತೆಯಿಂದ ಮಾತ್ರ ತೃಪ್ತಿ ಹೊಂದಿ ಕೂಡಬಾರದು. ನಾವು ಜಾಗೃತರಾದಾಕ್ಷಣ ನಿಜವಾದ ಸ್ವಾತಂತ್ರ್ಯದ ಕಡೆಗೆ ಧಾವಿಸಬೇಕು. ಮುಕ್ತಿ ಹೊಂದಿದ ಆತ್ಮನು ತನ್ನ ಕರ್ಮಫಲ ಮತ್ತು ಕರ್ಮವನ್ನು ಕೂಡ ಪರಮಾತ್ಮನಿಗೆ ಅರ್ಪಿಸಿದ ಮುಕ್ತಿಯ ಸಾಧಕನು ಅತ್ಯುತ್ತಮ ಶಾಸ್ತ್ರವನ್ನು ಕೂಡ ಮೀರಿ ಆಚೆಗೆ ಹೋಗುತ್ತಾನೆ.

ಪರಮಾತ್ಮನ ಆದೇಶದಂತೆ ಪ್ರಕೃತಿಯು ಎಲ್ಲ ಕರ್ಮಗಳನ್ನು ಮಾಡುತ್ತದೆ. ಮತ್ತು ಪರಮಾತ್ಮನು ನಮ್ಮ ಸ್ವಭಾವಕ್ಕನುಸರಿಸಿ ಕರ್ಮವನ್ನು ನಿರ್ಧಾರಗೊಳಿಸುವನೆಂಬುದನ್ನು ಮನಗಾಣುವುದು ಕರ್ಮ ಸಮರ್ಪಣಕ್ಕೆ ಅತ್ಯುತ್ತಮ ತಳಹದಿಯಾಗುವುದು. ಆ ಕ್ಷಣದಿಂದಾ ಕರ್ಮವು ಪರಮಾತ್ಮನದೆ. ಕರ್ಮವೂ ನಿಮ್ಮದಲ್ಲ, ಹೊಣೆಗಾರಿಕೆಯೂ ನಿಮ್ಮದಲ್ಲ; ನಿಜವಾಗಿ ನೋಡಿದರೆ ಹೊಣೆಗಾರಿಕೆಯೂ ಇಲ್ಲ, ಕರ್ಮ ಬಂಧನವೂ ಇಲ್ಲ, ಶಾಸ್ತ್ರವನ್ನು ಅನುಸರಿಸುವ ಮನುಷ್ಯನ ಕರ್ಮಗಳಂತೆ ನಮ್ಮ ಕರ್ಮ ಸ್ವಭಾವನಿಯತ; ಸ್ವಭಾವದಿಂದ ನಿಯಂತ್ರಿಸಲ್ಪಡುವಂಥವು. ಆದ್ದರಿಂದ ಧರ್ಮಆಗುವುದಲ್ಲದೆ, ನಮ್ಮ ಸ್ವಭಾವವೇ ಯಂತ್ರದಂತೆ ದೇವರಿಂದ ನಿಯಂತ್ರಿಸಲ್ಪಡುವುದು. ಅಜ್ಞಾನದ ಸಂಸ್ಕಾರಗಳಲ್ಲಿ ನಾವು ಮುಳುಗುವುದರಿಂದ ಜ್ಞಾನದ ಮಟ್ಟವನ್ನು ಮುಟ್ಟುವುದು ಸುಲಭವಲ್ಲ. ಇದನ್ನು ತೀವ್ರವಾಗಿ ಮುಟ್ಟಲು ಮೂರು ಮೆಟ್ಟಲುಗಳಿವೆ.

ಮೊದಲನೆಯದೆಂದರೆ“ ತ್ವಯಾ ಹೃಷಿಕೇಶ ಹೃದಿಸ್ಥಿತೇನ ಯಥಾನಿಯುಕ್ತೋऽಸ್ಮಿ

ತಥಾ ಕರೋಮಿ ” ನನ್ನ ಹೃದಯದಲ್ಲಿದ್ದ ಹೃಷಿಕೇಶನೇ ನೀನು ನಿಯಮಿಸಿದಂತೆ ನಾನು ಕಾರ್ಯ ಮಾಡುವೆನು ಎಂಬ ಶ್ಲೋಕದ ಭಾವನೆಯಿಂದ ಜೀವನ ಸಾಗಿಸುವುದು. ಈ ಭಾವವು ನಮ್ಮ ದಿನಚರಿಯಲ್ಲಿ ಬಂದಿತೆಂದರೆ ಎರಡನೆಯ ಅವ್ಯಸ್ಥೆಯನ್ನು ಸಾಧಿಸಿ, ಗೀತೆಯ ಜ್ಞಾನದಿಂದ ಜೀವನ ಸಾಗಿಸುವುದು ಸುಲಭವಾಗುವುದು.

“ ಈಶ್ವರಃ ಸರ್ವಭೂತಾನಾಂ ಹೃದ್ದೇಶೇऽರ್ಜುನತಿಷ್ಠತಿ ಭ್ರಾಮಯನ್ ಸರ್ವ ಭೂತಾನಿಯಂತ್ರರೂಢಾನಿ ಮಾಯಯಾ ”- ಪರಮಾತ್ಮನು ಎಲ್ಲ ಜೀವಿಗಳ ಹೃದಯಗಳಲ್ಲಿ ಇದ್ದುಕೊಂಡು ಅವುಗಳನ್ನು ಚಕ್ರದಮೇಲೆ ತಿರುಗಿಸುವಂತೆ ತ್ರಿಗುಣಗಳ ಮಾಯೆಯಿಂದ ತಿರುಗಿಸುತ್ತಾನೆ ಎಂದರ್ಥವಾದಾಗ ನಿಮಗೆ ನಿಮ್ಮಲ್ಲಿ ತ್ರಿಗುಣಗಳ ಕಾರ್ಯವು ಕಂಡು ಬರುವುದು. ಯಂತ್ರವು ಕಾರ್ಯ ಮಾಡುತ್ತಿರುವುದನ್ನು ನೀವು ನಿರೀಕ್ಷಿಸಬಲ್ಲಿರಿ. ಆಗ ನೀವು ‘ ತಥಾಕರೋಮಿ ’-ನಾನು ಮಾಡುತ್ತೇನೆ ಎನ್ನದೆ ಗುಣಾವರ್ತಂತೇ ಏವ’ ಇದು ಕೇವಲ ಗುಣಗಳ ಆಟವು ಎಂದು ಅನ್ನುವಿರಿ. ಆಗ ನೀವು ಯಾವಾಗಲೂ ಒಂದು ಮಾತನ್ನು ನೆನಪಿಡತಕ್ಕದ್ದು. ಅದಾವುದೆಂದರೆ ನೀವು



ನಿಮ್ಮನ್ನು ದೇವರ ಕೈಗೆ ಒಪ್ಪಿಸಿಬಿಟ್ಟದ್ದರಿಂದ ನಿಮ್ಮ ದೋಷಗಳನ್ನು ಅವನೇ ದೂರ ಮಾಡುವನು. ಮತ್ತು ನೀವು ಪಾಪ ಅಥವಾ ಪುಣ್ಯಗಳಲ್ಲಿ ಆಸಕ್ತಿಯನ್ನಿಡಲಾರಿರಿ. ಏಕೆಂದರೆ ಅವನು ಮೇಲಿಂದ ಅಭಯ ವಚನವನ್ನು ಕೊಟ್ಟಿದ್ದಾನೆ. ‘ ಪ್ರತಿಜಾನಿಹಿ ನಮೋ ಭಕ್ತಃ ಪ್ರಣಶ್ಯತಿಃ ನನ್ನ ಭಕ್ತನು ನಾಶವಾಗುವುದಿಲ್ಲವೆಂಬುದನ್ನು ಖಂಡಿತವಾಗಿ ತಿಳಿದುಕೊ.

ಎರಡನೆ ಅವಸ್ಥೆಯೆಂದರೆ ಮೂರನೆ ಅವಸ್ಥೆಯು ಬರುವುದು. ಇದು ಪರಮಾತ್ಮನ ಪೂರ್ಣ ಸಾಕ್ಷಾತ್ಕಾರದಿಂದ ಬರಬಹುದು ಅಥವಾ ಅವನ ಕೃಪೆಯಿಂದ ತಾನಾಗಿಯೇ ಬರಬಹುದು. ಈ ಸ್ಥಿತಿಯಲ್ಲಿ ಪುರುಷನ ಪ್ರಕೃತಿಯಿಂದ ಇರುವನಲ್ಲದೆ ಪ್ರಕೃತಿಯೂ ಕೂಡ ತ್ರಿಗುಣಗಳನ್ನು ಉಪಯೋಗಿಸುತ್ತಿದ್ದರೂ ಅವುಗಳ ಬಂಧನಕ್ಕೆ ಒಳಗಾಗಿರುವುದಿಲ್ಲ. ನಾವು ಸತ್ವ ಎಂದು ಕರೆಯುವ ಗುಣವು ಮಾಯವಾಗಿ ಶುದ್ಧ ಪ್ರಕಾಶ ಮತ್ತು ಜ್ಯೋತಿಯಲ್ಲಿ ಪರಿವರ್ತನವಾಗುವುದು ಮತ್ತು ಪ್ರಕೃತಿಯು ಶುದ್ಧ, ಸ್ವತಂತ್ರ ಅನಂತ ಮತ್ತು ಸ್ವಯಂಭುವಾದ ಜ್ಞಾನದ ಸ್ಥಿತಿಯಲ್ಲಿರುವುದು. ತಾವು ತಮ ಎಂದು ಕರೆಯುವ ಗುಣವು ಶುದ್ಧ ಶಮ ಅಥವಾ ಶಾಂತಿಯಲ್ಲಿ ಪರಿವರ್ತನ ಹೊಂದುವುದು. ಮತ್ತು ಆಗ ಪ್ರಕೃತಿಯು ಸ್ವತಂತ್ರವಾದ ಮತ್ತು ಅನಂತವಾದ ದಿವ್ಯ ಶಕ್ತಿಯ ಮಹಾಸಾಗರವಾಗಿ ಹರಿಯುವುದು. ಆ ಶಾಂತಿಯು ತಳಹದಿಯ ಮೇಲೆ ಮತ್ತು ಆ ಪ್ರಕಾಶದ ಸ್ವರ್ಗದಲ್ಲಿ ಕಾರ್ಯವೆಂಬುದು ಪರಮಾತ್ಮನ ಸಂಕಲ್ಪದೊಡನೆ ಒಂದಾದ ಅವನ ಜ್ಞಾನದ ಸ್ವಯಂ ಸ್ಫೂರ್ತ ಅಭಿವ್ಯಕ್ತಿಯಾಗಿರುವುದು. ಇದು ಅನಂತತೆಯ ಅವಸ್ಥೆಯು. ಇದರಲ್ಲಿ ಬಂಧಿತ ಮತ್ತು ಸಂಕುಚಿತವಾದ ಸತ್ವ, ರಜ ಮತ್ತು ತಮಗಳ ಸಂಘರ್ಷದ ಬದಲಾಗಿ ಸ್ವತಂತ್ರವಾದ ಪ್ರಕಾಶ, ತಮ ಮತ್ತು ಶಮಗಳ ಮಹಾ ಸಾಮರಸ್ಯವು ಸ್ಥಾಪಿತವಾಗುವುದು. ನಿಮ್ಮ ಮನ, ಹೃದಯ, ದೇಹಗಳು ನಿಮ್ಮದಾಗಿ ಉಳಿಯುವುದಿಲ್ಲ. ಭಗವಂತ ನೀವೇ ಆಗುವಿರಿ. ನೀವು ಸ್ವತಃ ಸಚ್ಚಿದಾನಂದದ ಕೇಂದ್ರವಾಗುವಿರಿ ಮತ್ತು ಪರಮಾತ್ಮನು ಅದರ ದ್ವಾರಾ·ಆಧಾರದಲ್ಲಿ ಕಾರ್ಯ ಮಾಡುವನು. ಈ ಸ್ಥಿತಿಯಲ್ಲಿ ‘ಯಸ್ಯ ನಾಹಂ ಕೃತೋ ಭಾವೋ ಬುದ್ಧಿರ್ಯಾಸ್ಯ ನಲಿಪ್ಯತೇ” ಯಾವ ಭಾವವು ಅಹಂಕಾರದಿಂದ ಮುಕ್ತವಾಗಿರುವುದೊ ಮತ್ತು ಯಾವನ ಬುದ್ಧಿಗೆ ಕಲಂಕ ತಗಲುವುದಿಲ್ಲವೋ ಎಂಬ ವರ್ಣನೆಯು ಸರ್ವಥಾ ಪೂರ್ತಿಯಾಗಿರುವುದು. ಇಂಥ ಕರ್ಮ ಸಮರ್ಪಣೆಗೆ ಶ್ರೀ ಕೃಷ್ಣನು ಬಹಳ ಮಹತ್ವ ಕೊಟ್ಟಿದ್ದಾನೆ ಎಂದಿದ್ದಾರೆ ಶ್ರೀ ಅರವಿಂದರು.

ಒಟ್ಟಿನಲ್ಲಿ ಹೇಳುವ ತಾತ್ಪರ್ಯವಿಷ್ಟೆ “ಸ್ವಕರ್ಮಣಾ ತಮಭ್ಯರ್ಚ ಸಿದ್ಧಿಂ ವಿಂದಂತಿ ಮಾನವಃ– ಆ ಪರಮಾತ್ಮನನ್ನು ಸ್ವಕರ್ಮದಿಂದಾರಾಧಿಸಿ ಮಾನವನು ಸಿದ್ಧಿಯನ್ನು ಹೊಂದುತ್ತಾನೆಂದು ಭಗವಂತನು ನೀಡಿದ ಅನುಗ್ರಹವಚನದಂತೆ ವರ್ತಿಸಿ ಜ್ಞಾನ ಪ್ರಾಪ್ತಿಗಾಗಿ, ಜಗನ್ಮಾತೆಗಾಗಿ ಕರ್ಮವನ್ನು ಸಮರ್ಪಣಾ ಭಾವದಿಂದ ಆಚರಿಸಲಿಕ್ಕೇ

ಬೇಕು. ಕರ್ಮವಿರಹಿತವಾದ ಸಿದ್ಧಿ ಹೆಳವನಂತೆಯೇ ಸರಿ, ಕರ್ಮಸಹಿತವಾದ ಸಿದ್ಧಿ ಪೂರ್ಣತ್ವದ ಸಿರಿ. ಫಲಾಪೇಕ್ಷೆಯಿಲ್ಲದೆ, ಸಮರ್ಪಣ ಭಾವದಿಂದ ಮಾಡಿದ ಕರ್ಮವೇ ಪರಮಾತ್ಮನ ಸಾಕ್ಷಾತ್ಕಾರ. ನಿಷ್ಕಾಮ ಭಾವದಿಂದ ಸ್ವಕರ್ಮದಲ್ಲಿ ಮುನ್ನಡೆಯುವುದರಿಂದ ಜ್ಞಾನಯೋಗವು ಸಿದ್ಧಿಯಾಗುತ್ತದೆ. ಜ್ಞಾನಯೋಗವು ನಿಷ್ಕಾಮ ಭಾವವನ್ನು ಪ್ರೇರಿಸುತ್ತದೆ. ಅರ್ಪಣವೂ ಬ್ರಹ್ಮನೇ. ಹವನ ಮಾಡುವವನೂ ಬ್ರಹ್ಮಸ್ವರೂಪನೇ. ಇದೆಲ್ಲಾ ಹೋಗಿ ಮುಟ್ಟುವುದೂ ಪರಬ್ರಹ್ಮಗೇನೇ. ಇಂಥ ಬ್ರಹ್ಮಕರ್ಮ ಸಮಾಧಿಯಲ್ಲಿ ಎಲ್ಲವೂ ಬ್ರಹ್ಮಮಯವೇ ಆಗಿರುತ್ತದೆ. ಜ್ಞಾನ-ಕರ್ಮವೆರಡೂ ಸಮನ್ವಯ ಗೊಳ್ಳುತ್ತವೆ.
(ಶ್ರೀ ಅರವಿಂದ ಗ್ರಂಥಗಳಿಂದ ಸಂಗ್ರಹಿಸಿದ್ದ ಅಂಶಗಳಿಂದ ಸಂಕಲಿಸಿದ ಲೇಖನವಿದು)

## ಶರಣು ಗುರುದೇವ

*-ಕವಿತಾಕೃಷ್ಣ, ಕ್ಯಾತ್ಸಂದ್ರ, ತುಮಕೂರು-3.

ಧರ್ಮಹಿಮಾಲಯದ ಉತ್ತುಂಗಶಿಖರ
ಚೆಲ್ಲಿಹೊಂಗಿರಣ ಬೆಳಗುತಿಹ ಭಾಸ್ಕರ
ನೀಗಿ ತಮವನು ಸುಜ್ಞಾನ ಚೆಲ್ಲಿದ ಶ್ರೀಕರ
ಭರತ ಮಾತೆಯ ಚಿಜ್ಯೋತಿ ಶಿವಕುಮಾರ ||

ಹಸಿದ ಒಡಲಿಗೆ ಅನ್ನವಿಟ್ಟ ಭೂಪ
ವಿದ್ಯೆಯ ಮತಿಮತಿಗು ಬೆಳಗಿದ ದೀಪ
ಮಂಗಳದ ಮನೆಕಟ್ಟದ ಶರಣರಾಶಾ ರೂಪ
ನೀಗಿದೆ ದಿಸೆಗೆಟ್ಟ ಜನತೆಯ ಶಾಪ.

ಸಿದ್ಧಗಂಗೆಯ ಸಿದ್ಧಿಪುರುಷನಾದ ತಂದೆ
ಬಾಳ ಬೆಳಕು ಕರುಣಿಸಿ ನೀನಿತ್ತ ಬಂಡೆ
ಅಣ್ಣ ಬಸವನ ಬೆಳಕು ಎತ್ತೆತ್ತ ಚೆಲ್ಲಿದೆ
ಕತ್ತಲಲಿ ತೊಳಲುವವರ ಕೈಯ್ಯ ಹಿಡಿದೆ.

ಕಾರುಣ್ಯ ಸಾಗರ ಸಿರಿನಾಡ ಶ್ರೀಕರ
ಬಾಳ ಸಂಜೀವಿನಿ ಕರುನಾಡ ಬಂಗಾರ
ಉದ್ಧರಿಸು ದೀನರ ಸಿದ್ಧಗಂಗೆಯ ಧೀರ
ಕೋಟಿ ಶರಣು ಗುರುದೇವ ಶಿವಕುಮಾರ



# ಕನ್ನಡನಾಡ ವೈಸಿರಿ ಕಂಡ ವಿದೇಶಿ ಪ್ರವಾಸಿಗರು

ಲೇ|| ಹೊನ್ನಾವರ ಆರ್. ಜಿ. ಶ್ಯಾನಭಾಗ, ಶರಾವತಿ ಪ್ರೌಢಶಾಲೆ, ಹೊಸಾಡ, ಹೊನ್ನಾವರ.

ಕರ್ನಾಟಕ ಎಂದೊಡನೆ ವಿರಾಟರೂಪದ ಸಂಸ್ಕೃತಿ ನಮ್ಮೆದರು ಕಣ್ಣಿಗೆ ಕಟ್ಟುವ ರೀತಿಯಲ್ಲಿ ಚಿತ್ರಿತವಾಗುತ್ತದೆ. ಕನ್ನಾಡು, ಕರಿನಾಡು, ಇವೇ ಮೊದಲಾದ ಹೆಸರಿನಿಂದ ಸಂಬೋಧಿಸಲ್ಪಡುತ್ತಿರುವ ಕರ್ನಾಟಕ, ಚಿನ್ಮಯಧಾಮ ಹಾಗೂ ಸಾಕ್ಷಾತ್ ಸ್ವರ್ಗಸಮಾನವಾದ ನಾಡೆಂದೂ, ಕವಿಗಳು ಹೊಗಳಿದ್ದಾರೆ. ಚೆಲುವಿನ ನಾಡು ಚೆಲುವು ಚೆಲ್ಲುವ ನಾಡೇ ಕನ್ನಡ ನಾಡೆಂದು ಶ್ರೀಯವರು ಕನ್ನಡನಾಡಿನ ಹಿರಿಮೆ ಗರಿಮೆಯನ್ನು ತಮ್ಮ ಕಾವ್ಯವೊಂದರಲ್ಲಿ ಮನಸಾರೆ ಹೊಗಳಿದ್ದಾರೆ. ಕರ್ನಾಟಕವೆನ್ನುವುದು ಕೇವಲ ಹೆಸರಲ್ಲಿ ಯೆಂತ ಕಣಾ' ಶಕ್ತಿ ಕಣಾ, ತಾಯಿ ಕಣಾ, ದೇವಿಕಣಾ ಎಂದು ಕವಿ ಪುಂಗವರಾದ ಕುವೆಂಪುರವರು ನಾಡಸಿರಿಯನ್ನು ಸ್ತುತಿಸಿದ್ದಾರೆ. ಆದರೆ ಭವ್ಯ ಹಾಗೂ ದಿವ್ಯ ಚದುರಿರುವ ಇತಿಹಾಸದ ತುಣುಕುಗಳೇ ಆಗಿದ್ದವು. ರಾಜಕೀಯವಾಗಿ ಚದುರಿಹೋಗಿರುವ ಕನ್ನಡ ನಾಡು ಸುಸ್ಪಷ್ಟ ಹಾಗೂ ನಿಖರವಾಗಿ ಗೋಚರವಾಗಿರುವುದು, ಏಕೀಕರಣದ ನಂತರವೇ ಆಗಿದೆ. 3 ಸಾವಿರ ವರ್ಷಗಳ ಪ್ರಾಚೀನತೆ ಹೊಂದಿರುವ ಕನ್ನಡ ನಾಡಿನ ಇತಿಹಾಸವನ್ನು ಸಮಗ್ರವಾಗಿ ಬರೆಯಲು ಯಾರೂ ಕ್ರಮಿಸಿರುವಂತೆ ಕಾಣಲಾರದು. ಕ್ರೈಸ್ತ ಮಿಶನರಿಗಳು, ಹಾಗೂ ವಿದೇಶಿ ಪ್ರವಾಸಿಗರು ಈ ನಿಟ್ಟಿನಲ್ಲಿ ಪ್ರಯತ್ನಶೀಲರಾಗಿರುವುದು ಗೋಚರವಾಗುತ್ತದೆ.

**ಚರಿತ್ರೆ ನಿರ್ಮಾಪಕರು :**

ಕನ್ನಡ ನಾಡಿನ ಚರಿತ್ರೆಯ ಮೊದಲ ನಿರ್ಮಾಪಕರು ಯುರೋಪಿಯನ್ನರೇ ಆಗಿದ್ದಾರೆ. ಶಾಸನ ಪಿತಾಮಹಾರಾದ ಕರ್ನಲ್ ಮೆಕಂಜಿ, ಹೆನ್ರಿ ಕೆಸೆನ್ಸ್ ಬಿ. ಎಲ್. ರೈಸ ಜೇ. ಎಫ್ ಪೀಟ ಹಾಗೂ ಇತರ ಮಿಶನರಿಗಳೇ ಕನ್ನಡ ನಾಡಿನ ಚರಿತ್ರಾಕಾರೆಂದು ಹೆಸರಿಸಿದರೆ ಪ್ರಮಾದವಾಗಲಾರದು. ಪ್ರಾಚ್ಯವಸ್ತುಗಳನ್ನು ಸಂಗ್ರಹಿಸಿ ಅವುಗಳಿಗೆಅರ್ಥವಿವರಣೆಯನ್ನು ನೀಡಿ ಕನ್ನಡನಾಡಿನ, ಇತಿಹಾಸ ಸಮಗ್ರವಾಗಿ ರೂಪಿಸಿರುವ ರೂವಾರಿಗಳವರು. ರಾಜಾಧಿರಾಜ, ಮಹಾರಾಜರುಗಳ ಆಳ್ವಿಕೆಯಲ್ಲಿ ಅವರ ದರಬಾರಗಳನ್ನು ಸಂದರ್ಶಿಸಿ, ಅಲ್ಲಿಯ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಗಳನ್ನು ತಮ್ಮ ಪ್ರವಾಸ ಕಥನಗಳಲ್ಲಿ ಬರೆದಿರುವ ವಿದೇಶಿ ಪ್ರವಾಸಿಗರು ಮೇಲಿನ ಪಂಕ್ತಿಗೆ ಸೇರ್ಪಡೆಯಾಗಿರುತ್ತಾರೆ. ಪ್ರವಾಸಿಗರ ದಿನಚರಿಗಳು ಕನ್ನಡಿಗರ ಜೀವನ ಕ್ರಮಗಳನ್ನು ಪರಿಚಯಿಸುವ ಗ್ರಂಥಗಳಾಗಿವೆ. ಕೆಲವು ಪ್ರವಾ

ಸಿಗಳು ವಾಣಿಜ್ಯ ಉದ್ದೇಶವನ್ನಿಟ್ಟುಕೊಂಡು ಬಂದವರು. ಇನ್ನೂ ಕೆಲವರು ರಾಯಭಾರಿಗಳಾಗಿ ಬಂದವರು ಇಲ್ಲವೇ ಮತ ಪ್ರಚಾರಕ್ಕಾಗಿ ಬಂದವರು ಆನಂದ ಪ್ರವಾಸಕ್ಕಾಗಿ, ಬಂದ ಪ್ರವಾಸಿಗಳೂ ಇದ್ದಾರೆ. ಹಲವಾರು ಉದ್ದೇಶಗಳನ್ನು ಹೊತ್ತು ಬಂದಿರುವ ಈ ಪ್ರವಾಸಿಗಳು ಪ್ರವಾಸಕಾಲದಲ್ಲಿ ತಾವು ಪಟ್ಟಿರುವ ಪ್ರಯಾಸ ಹಾಗೂ ಅನುಭವಗಳನ್ನು ಬರೆದಿರುವ ಕಥನಗಳಲ್ಲಿ ದಾಖಲಿಸಿರುವುದು, ಇದುವೇ ಕನ್ನಡ ನಾಡಿನ ಇತಿಹಾಸವಾಗಿ ಮೂಡಿ ಬಂದಿದೆ.

**ಸಾಂಸ್ಕೃತಿಕ ರಾಯಭಾರತ್ವ :**

ಕ್ರಿ.ಶ. 77ರಲ್ಲಿ ಪ್ಲಿನಿಯಿಂದ ಬರೆಯಲ್ಪಟ್ಟಿರುವ ನೈಸರ್ಗಿಕ ಭೂಗೋಳ ಶಾಸ್ತ್ರದಲ್ಲಿ ರೋಮ ಮಹಿಳೆಯರಿಗೆ ಕನ್ನಡನಾಡಿನಲ್ಲಿಯ ಅಲಂಕಾರ ವಸ್ತುಗಳು ಪ್ರಿಯವಾಗಿದ್ದವು ಎನ್ನುವುದರ ಕುರಿತಾದ ಉಲ್ಲೇಖವಿದೆ. ರೋಮ ಹಾಗೂ ಕನ್ನಡನಾಡಿಗೆ ಇರುವ ವಾಣಿಜ್ಯ ಸಂಬಂಧ ಕನ್ನಡನಾಡಿನಲ್ಲಿ ದೊರೆತಿರುವ ನಾಣ್ಯ ಹಾಗೂ ಮಣ್ಣಿನ ಪಾತ್ರೆಗಳಿಂದ ತಿಳಿದು ಬಂದಿದೆ. ಚೀನಾ ಮತ್ತು ಕನ್ನಡ ನಾಡಿಗೆ ಇರುವ ವ್ಯಾಪಾರ ಸಂಬಂಧ ಪ್ರವಾಸಿ ಕಾಸಮಾಸನಿಂದ ತಿಳಿದು ಬಂದಿದೆ. ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಚೀನಿಯರ ನೌಕಾಪಡೆಯೊಂದು ಕೊಚ್ಚಿ ಹಾಗೂ ಕಲ್ಲಿಕೋಟೆಯವರೆಗೆ ಬಂದಿರುವ ಉಲ್ಲೇಖ ಇರುವದು. ನೀಲಿ ತವರು, ಪನ್ನಿರು ಕನ್ನಡನಾಡಿಗೆ ಆಮದಾಗುವ ವಸ್ತುಗಳಾಗಿದ್ದವು. ಕನ್ನಡನಾಡು ಅರಬ ರಾಷ್ಟ್ರಗಳಿಂದಲೂ ಸಂಪರ್ಕ ಹೊಂದಿತ್ತು. ಪರ್ಶಿಯಾದ ಚಕ್ರವರ್ತಿ ಖುಸ್ರು ಇಮ್ಮಡಿ ಪುಲಕೇಶಿಯ ಆಸ್ಥಾನಕ್ಕೆ ರಾಯಭಾರಿಯನ್ನು ಕಳುಹಿಸಿದ್ದನ್ನು, ಅಜಂತ ಗುಹೆಯಲ್ಲಿ ಮೂಡಿರುವ ಬಿತ್ತಿಚಿತ್ರ ಇದಕ್ಕೆ ಜೀವಂತ ಸಾಕ್ಷಿಯಾಗಿ ನಿಂತಿದೆ. ಅರಬ್ಬೀ ಪ್ರವಾಸಿ ಸುಲೇಮಾನ ರಾಷ್ಟ್ರಕೂಟರ ಆಸ್ಥಾನಕ್ಕೆ ಕ್ರಿ. ಶ. 9ನೇ ಶತಮಾನದಲ್ಲಿ ಭೇಟಿ ನೀಡಿದನು. ಅಲ್ಲಮ ಎನ್ನುವ ಇಸ್ಕೋರ್ವ ಅರಬ್ಬೀ ಪ್ರವಾಸಿ 9ನೇ ಶತಮಾನದಲ್ಲಿ ರಾಷ್ಟ್ರಕೂಟರ ಆಸ್ಥಾನಕ್ಕೆ ನೀಡಿದ್ದಾನೆ. ಖರ್ಜೂರ, ತವರ, ಕುದುರೆಗಳು, ಚಾಕು, ಕತ್ತಿ ಇತ್ಯಾದಿ ಸರಕುಗಳನ್ನು ತಂದು ಅರಬವರ್ತಕರು ಕನ್ನಡನಾಡಿನಲ್ಲಿ ಮಾರುತ್ತಿದ್ದರು. ಅರಬರು ಇಲ್ಲಿಂದ ಸಂಚಾರ ಜಿನುಸುಗಳನ್ನು ಒಯ್ಯುತ್ತಿದ್ದರು. ಅರಬರ ಮತ್ತು ಕನ್ನಡಿಗರ ಸೌಹಾರ್ದ ಸಂಬಂಧ ರಾಯಜಾಲ ಕೋಟೆಯಲ್ಲಿ ಮೇಲಿರುವ ಭಿತ್ತಿಶಾಸನಗಳು ತೋರಿಸುತ್ತವೆ. ಕನ್ನಡನಾಡಿನ ನಿಗ್ರೋಗಳ ವ್ಯಾಪಾರ ನಡೆಯುತ್ತಿತ್ತಲ್ಲದೆ ಬಿಜಾಪುರದ ಸುಲ್ತಾನರು ಈ ವ್ಯಾಪಾರದಲ್ಲಿ ಆಸಕ್ತಿಯನ್ನು ತೋರಿಸುತ್ತಿದ್ದರಂತೆ. ಕನ್ನಡನಾಡಿನ ಆಳರಸರು ಹೊರಡಿಸಿರುವ ಬೆಳ್ಳಿಯ ನಾಣ್ಯಗಳು ಅರೇಬಿಯಾದಲ್ಲಿ ದೊರಕಿವೆ. ಬಹ್ಮನಿ ದೊರೆಗಳು ವಿದೇಶಿಯರಿಗೆ ತಮ್ಮ ರಾಜ್ಯದಲ್ಲಿ ನೌಕರಿಯನ್ನು ನೀಡುತ್ತಿದ್ದರು. ಅರೆಬಿಯಾ ತುರ್ಕಿ, ಪರ್ಷಿಯಾಗಳಿಂದ ನೌಕರಿಯನ್ನರಸಲು ಜನರು ಕನ್ನಡನಾಡಿಗೆ ಬರುತ್ತಿದ್ದರು. ಬಹ್ಮನಿ ರಾಜ್ಯದಲ್ಲಿ ದಕ್ಷಪ್ರಧಾನಿ ಹಾಗೂ ಸೇನಾಪತಿ ಎಂದು ನಾಮವಾಸಿಯಾದ



ಮಹಮ್ಮದ ಗವಾನನು ಪರ್ಷಿಯಾದಿಂದ ಬಂದವನಾಗಿದ್ದನು. ವಿಜಯನಗರ ಕಾಲದಲ್ಲಿ ಬಹಳಷ್ಟು ವಿದೇಶಿ ಪ್ರವಾಸಿಗಳು ಕನ್ನಡನಾಡಿಗೆ ಆಗಮಿಸಿದ್ದರು. ವಿಜಯನಗರದ ಆಸ್ಥಾನಕ್ಕೆ ಭೇಟಿನೀಡಿರುವ ಅಬ್ದುಲ್ ರಜಾಕ, ಅರ್ಮೇನಿಯನ್ನರು ಈ ಸಾಮ್ರಾಜ್ಯದಲ್ಲಿ ನೆಲೆಸಿದ್ದರೆಂದು ಅವನು ಹೇಳಿರುವುದು. ವಿಜಯನಗರದಿಂದ ತುರ್ಕಿಗೆ ಒಡವೆಗಳು ರಫ್ತಾಗುತ್ತಿದ್ದವು. ದ್ರಾಕ್ಷಿ, ತಾಮ್ರ, ಪಾದರಸ, ಕೇಸರಿ, ಗುಲಾಬಿ, ಪರಿಮಳ ದ್ರವ್ಯಗಳು ಕೆಂಪು ರೇಶ್ಮೆಗಳು ಅಲ್ಲಿಂದ ಆಮದಾಗುತ್ತಿದ್ದವೆಂದು ರಜಾಕನು ಹೇಳಿದ್ದಾನೆ. ಆನೆಗಳನ್ನು ಸೆರೆಹಿಡಿದು ಪಳಗಿಸುವ ವಿಧಾನವನ್ನು ಕಂಡಿರುವ ಮೆಗಾಸ್ತನೀಸನು ತನ್ನ ಪ್ರವಾಸ ಕಥನದಲ್ಲಿ ಉಲ್ಲೇಖಿಸಿರುವುದು ಕಾಕನಕೋಟೆಯಲ್ಲಿ ಅನುಸರಿಸುತ್ತಿರುವ ಖೆಡ್ಡಾ ವಿಧಾನಕ್ಕೆ ಹೋಲುವುದರಿಂದ ಅವನು ಕನ್ನಡನಾಡಿಗೂ, ಭೇಟಿ ನೀಡಿರುವುದನ್ನು ಖಚಿತವಾಗಿ ಹೇಳಬಹುದಾಗಿದೆ.

**ಪ್ರವಾಸಿಗರ ಪಾದಾರ್ಪಣ :**

ಕನ್ನನಾಡಿಗೆ ಬಂದಿರುವ ವಿದೇಶಿ ಪ್ರವಾಸಿಗರು ಸಮುದ್ರಮಾರ್ಗವಾಗಿ ಪಶ್ಚಿಮ ಕರಾವಳಿಯನ್ನು ಸಂಪರ್ಕಿಸಿರುವುದು ಅವರ ಗ್ರಂಥಗಳಿಂದ ತಿಳಿದು ಬರುವುದು. ಹೊನ್ನಾವರ, ಮಂಗಳೂರು, ಕಾರವಾರ, ಭಟ್ಕಳ, ಬಸ್ರೂರ, ಬಾರ್ಕೂರ, ಬೈಂದೂರು, ಗಂಗೊಳ್ಳಿ ಬ್ರಹ್ಮಾವರ ಮೊದಲಾದ ಬಂದರುಗಳನ್ನು ತುಳಿದು ಒಳನಾಡಿನಲ್ಲಿರುವ ಸಾಮ್ರಾಜ್ಯದೆಡೆಗೆ ಹೋಗಿದ್ದಾರೆ. ಬೀದರ, ವಿಜಯನಗರ, ಕೆಳದಿ, ಗುಲಬುರ್ಗಾ, ಬಿಜಾಪುರ ಸಾಮ್ರಾಜ್ಯದಲ್ಲಿ ಭೇಟಿಯನ್ನು ನೀಡಿದರು. ಅಳರಸರ ಸ್ವಾಗತವನ್ನು ಪಡೆದು ಅವರ ರಾಜಾಶ್ರಯದಲ್ಲಿ ಅಂದು ಪ್ರಚಲಿತವಿರುವ ವಿಶಿಷ್ಟ ಸಂಪ್ರದಾಯಗಳನ್ನು ಭಾವೀ ಪೀಳಿಗೆಯ ತಿಳುವಳಿಕೆಗಾಗಿ ದಾಖಲಿಸಿಕೊಂಡಿರುವುದರಿಂದ ಕನ್ನಡನಾಡಿನ ಇತಿಹಾಸವು ರೂಪಗೊಂಡಿರುವುದು.

ಹುಯೇನತ್ಸಾಂಗ, ಮಾರ್ಕೊಪೋಲೋ, ಇಬಿನ್ ಬಿತೂತಾ, ನಿಕೊಲೊ-ದ-ಕೊಂತಿ, ಅಬ್ದುಲ್ ರಜಾಕ, ನಿಕೆಟಿನ್, ಬಾರ್ಬೊಸಾ, ಡೊಮಿಂಗೊ, ಪಾಯೆಸ, ನೂನಿಜ, ಟೋಮವೇರಸ, ಸೀಜರ್, ಪೆಡ್ರಿಕ್, ಲಿನ್‌ಸ್ಕೊತ್‌ನ, ಪಿಯೆತ್ರೊದೆಲ್ಲಾ ವೆಲ್ಲೆ, ಮೈಥ್ವಲ್ಟ್ ಮ್ಲೋರಿಸ್ ಹಾಗೂ ಪೀಟರ್ ಮುಂಡಿ ಕನ್ನಡನಾಡನ್ನು ಸಂದರ್ಶಿಸಿರುವ ವಿದೇಶಿ ಪ್ರವಾಸಿಗರು. ಕನ್ನಡನಾಡಿನ ಅರಸರ ರಾಜಕೀಯ ಪರಿಸ್ಥಿತಿ ಅಂದಿನ ಆಚಾರ ವಿಚಾರ, ಮೂಢನಂಬಿಕೆಗಳು, ಮಹಿಳೆಯರ ಸ್ಥಾನಮಾನ, ದೇವಾಲಯ, ಹಬ್ಬಹರಿದಿನಗಳು, ಸತಿ ಸಿಡಿ, ವಿಶಿಷ್ಟ ಸಂಪ್ರದಾಯಗಳು, ಕೃಷಿ ಉತ್ಪನ್ನ, ಸಂಚಾರ ಸಾಗಾಣೆ ವ್ಯವಸ್ಥೆ ಇವೇ ಇತ್ಯಾದಿಗಳ ಕುರಿತು ಪ್ರವಾಸಿಗರು ಸ್ವಾರಸ್ಯಕರವಾಗಿ ಬರೆದಿದ್ದಾರೆ.

ಗ್ರೀಸ್ ದೇಶದ, ಖಗೋಳಶಾಸ್ತ್ರಜ್ಞ ಟಾಲೆಮಿ 2ನೇ ಶತಮಾನದ ಶಾತವಾಹನರ ರಾಜಧಾನಿಯಾದ ಪೈಠಣ, ಹಾಗೂ ಮುದಗಲ್, ಹೂವಿನ ಹಿಪ್ಪರಗಿ, ನಾಗೂರ ಮಳಿಬೇಡ, ಇಂಡಿ ಬನವಾಸಿಯ ಉಲ್ಲೇಖನವನ್ನು ತನ್ನ ಗ್ರಂಥದಲ್ಲಿ ಮಾಡಿರುವನು. 3ನೇ ಶತಮಾನದಲ್ಲಿ ಬೌದ್ಧ ಸನ್ಯಾಸಿ ಹುಯೆನತ್ಸಾಂಗ್ ಕೊಂಕಣಪುರ ನಾಡಿಗೆ ಬಂದಿದ್ದ. ಇದುವೇ ಉತ್ತರ ಕನ್ನಡ ಜಿಲ್ಲೆಯ ಇಂದಿನ ಬನವಾಸಿಯಾಗಿದೆ. ಚಾಲುಕ್ಯರ 2ನೇ ಪುಲಕೇಶಿಯ ಅಳ್ವಿಕೆಗೆ ಒಳಪಟ್ಟಿರುವ ಮಹಾರಾಷ್ಟ್ರ ಎಂಬ ನಾಡಿಗೆ ಭೇಟಿಯನ್ನು ನೀಡಿರುವುದಾಗಿ ಹೇಳಿರುವನು. ಇಲ್ಲಿಯ ನಿವಾಸಿಗಳು, ಕೆಚ್ಚೆದೆಯ ಹೋರಾಟಗಾರರೂ, ಶರಣಾಗತರಿಗೆ ರಕ್ಷಣೆಯನ್ನು ನೀಡುವವರೂ ಹಾಗೂ ವಿದ್ಯಾಪಕ್ಷಪಾತಿಗಳಾಗಿದ್ದರ ಕುರಿತಾಗಿ ಉಲ್ಲೇಖಿಸಿರುವನು. ಇಬ್ನಖಯರಾದಬೀ ಸುಲೇಮಾನ, ಅಬೂಜೆದ ಹಸನ ಎಂಬ ಪ್ರವಾಸಿಗರು ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡಿಗೆ ಸಂದರ್ಶನವನ್ನು ನೀಡಿದ್ದರು. ಬಲಾಢ್ಯ ದೊರೆ ವಲ್ಲಭರಾಜನು ತನ್ನ ಮುದ್ರೆಯುಂಗುರದ ಮೇಲೆ ಒಮ್ಮನಸ್ಸಿನಿಂದ ಆರಂಭಿಸಿದ ಕಾರ್ಯಕ್ಕೆ ವಿಜಯ ಖಚಿತವೆಂಬ ಸೂಕ್ತಿಯನ್ನು ಪಡಿಮುಡಿಸಿಕೊಂಡಿದ್ದನು. ಅರಸನು ಮರಣ ಹೊಂದಿದಾಗ ಅವನ ಅನುಚರರೂ ದೊರೆಗಾಗಿ ಹೊತ್ತಿಸಿರುವ ಚಿತೆಯಲ್ಲಿ ಹಾರಿಪ್ರಾಣಾರ್ಪಣ ಮಾಡುತ್ತಿದ್ದರೆಂದು ಈ ಪ್ರವಾಸಿಗಳು ಹೇಳಿರುವರು.

**ವೈಭವದ ಶಿಖರ :**– ಅರಬ್ಬೀ ಪ್ರವಾಸಿ ಅಲ್ಬೊರನಿ ಕರ್ನಾಟಕದಲ್ಲಿ ಕರ್ನಾಟಕ ಎಂಬ ಲಿಪಿ ಇತ್ತೆಂದು ಹೇಳಿರುವುನಲ್ಲದೇ ಇಲ್ಲಿಯ ಸೇವಾಪಡೆಗಳಲ್ಲಿ ಕನ್ನಡ ಎಂಬ ಜನರಿದ್ದರೆಂದು ಹೇಳಿದ್ದಾನೆ. ಪ್ರವಾಸಿ ಇಬ್ನಬಟೋಟ್ 14ನೇ ಶತಮಾನದಲ್ಲಿ ಪಶ್ಚಿಮ ಕರಾವಳಿಯ ಬಂದರುಗಳಾದ ಹೊನ್ನಾವರ ಬಸ್ರೂರು, ಬಾರೂರು ಹಾಗೂ ಮಂಗಳೂರಿಗೆ ಭೇಟಿಯನ್ನು ನೀಡಿದ್ದನು. ಆಗ ಹೊನ್ನಾವರ ವಿಜಯನಗರದ ದೊರೆ ಹರಿಹರನಿಗೆ ಅಧೀನವಾಗಿದ್ದು ಸುಲ್ತಾನ ಜಲಾವುದ್ದಿನನು ವಿಜಯನಗರದ ಪ್ರತಿನಿಧಿಯಾಗಿ ಆಳುತ್ತಿದ್ದನು. ಹೊನ್ನಾವರದ ಮುಸ್ಲಿಮ್ ಮಹಿಳೆಯರಿಗೆ ಕುರಾನ್ ಕಂಠಪಾಠವಾಗಿತ್ತೆಂದು ಹೇಳಿದ್ದಾನೆ. ಹೆಣ್ಣುಮಕ್ಕಳಿಗೆ 13 ಶಾಲೆಗಳೂ ಗಂಡು ಮಕ್ಕಳಿಗೆ 32 ಶಾಲೆಗಳೂ ಇದ್ದಿತ್ತೆಂದು ಉಲ್ಲೇಖ ಮಾಡಿರುವನು. ಬಸ್ರೂರಿನ ತೆಂಗಿನ ಕಾಯಿ ಬಾರ್ಕೂರಿನ ಕಬ್ಬು, ಮಂಗಳೂರಿನ ಒಣಶುಂಠಿ ರಫ್ತು ಸರಕುಗಳಾಗಿದ್ದವಂತೆ. ಕ್ರಿ:ಶ, 1414 ರಲ್ಲಿ ಪ್ರವಾಸಿ ನಿಕೊಲೊ ವಿಜಯನಗರಕ್ಕೆ ಭೇಟಿನೀಡಿದನು. ಅಂದು ಆಳುತ್ತಿದ್ದ ದೊರೆ ಎರಡನೇ ದೇವರಾಯ ನಾಡಿನಲ್ಲಿಯೇ ಬಲಾಢ್ಯವಾಗಿರುವ ದೊರೆ ಎಂದು ಅವನು ಹೇಳಿದ್ದಾನೆ. ಪ್ರವಸಿ ಅಬ್ದುಲ್ ರಜಾಕ, 15ನೇ ಶತಮಾನದಲ್ಲಿ ಮಂಗಳೂರಿನ ಬಳಿ ಇರುವ ಪೊಳಲಿ ದೇವಸ್ಥಾನಕ್ಕೆ ಭೇಟಿಯನ್ನು ನೀಡಿ ಅಲ್ಲಿಯ ರಾಜರಾಜೇಶ್ವರಿ ವಿಗ್ರಹವನ್ನು ವರ್ಣಿಸಿರುವನು. ರಾಯಭಾರಿಯಾಗಿ ಬಂದಿರುವ ಅವನನ್ನು ವಿಜಯನಗರ ಅದ್ದೂರಿಯಿಂದ ಸ್ವಾಗತಿಸಿತೆಂದು ಭೂಮಿಯ ಮೇಲೆ ವೈಭವೋಪೇತ



ವಾಗಿ ಮೆರೆದಿರುವ ವಿಜಯನಗರದಂಥ ಸಾಮ್ರಾಜ್ಯ ಇನ್ನಾವುದೇ ಇರುವುದನ್ನು ತಾನು ಕಣ್ಣಾರೆ ಕಂಡಿರುವದಿಲ್ಲವೆಂದೂ ರಜಾಕನು ಉದ್ಗರಿಸಿರುವನು. ರತ್ನಪಡಿ ವ್ಯಾಪಾರ ಬಹಿರಂಗವಾಗಿ ನಡೆಯುತ್ತಿತ್ತು. ಗುಲಾಬಿ ಹೂವುಗಳನ್ನು ರಾಶಿ ಹಾಕಿ ಮಾರುತ್ತಿದ್ದರು. ಹೂವಿನ ಕಂಪು ನಗರದಲ್ಲೆಡೆಯಲ್ಲಿ ತೇಲುತ್ತಿತ್ತು. ಪ್ರತಿಯೋರ್ವ ಪ್ರಜೆಯೂ ರತ್ನಖಚಿತ ಆಭರಣಗಳನ್ನು ಹೊಂದಿರುತ್ತಿದ್ದನಲ್ಲದೆ, ಅವುಗಳನ್ನು ಕೊಟ್ಟು ರಾಜ್ಯ ಹಾಗೂ ನಗರ ಬೀದಿಗಳಲ್ಲಿ ನಿರ್ಭಯವಾಗಿ ಸಂಚರಿಸುತಿದ್ದನು. ಮಹಾನವಮಿಯು ನಾಡ ಹಬ್ಬವಾಗಿತ್ತು. ರಾಜಪರಿವಾರದವರು ಶ್ರೀ ಸಾಮಾನ್ಯರು, ಶ್ರೀಮಂತ ಸರದಾರರೂ ಹಬ್ಬದಲ್ಲಿ ಪಾಲ್ಗೊಂಡು ಅದನ್ನು ಒಂಭತ್ತು ದಿನಗಳವರೆಗೆ ವೈಭವೋಪೇತವಾಗಿ ಆಚಸುತ್ತಿದ್ದರು. ವಿಜಯನಗರದ ದೊರೆ, ಮಹೋನ್ನತನಾಗಿದ್ದು ಈ ದೊರೆಯನ್ನು ಸರಿಸಾಟಿ ಎಂದೆನಿಸಿಕೊಳ್ಳುವ ಬೇರಾವ ದೊರೆಯೂ ಭಾರತದಲ್ಲಿ ಇರಲಿಲ್ಲವೆಂದು ರಜಾಕನು ಹೇಳತ್ತಾನೆ.

ರಶಿಯಾದ ಕುದುರೆ ವ್ಯಾಪಾರಿ ನಿಕಟ್‌ನ ಬೀದರಿಗೆ ಬಂದು ನಾಲ್ಕು ವರ್ಷಗಳವರೆಗೆ ತಂಗಿದ್ದನು. ಸುಲ್ತಾನನ ಸೊಗಸಾಗಿರುವ ಅರಮನೆ, ಕುದುರೆ, ರೇಷ್ಮೆ, ಕರಿಜನರ ವ್ಯಾಪಾರಿ ಶ್ರೀಮಂತರ ಅಷ್ಟೈಶ್ವರ್ಯ. ಬಡವರ ಬಡತನದ ಬೇಗೆಯ ಕುರಿತಾಗಿ ತನ್ನ ಪ್ರವಾಸ ಕಥನದಲ್ಲಿ ಬರೆದಿರುವನು. ವಿಜಯನಗರ ಆಗ ಅನಾವೃಷ್ಟಿಯಿಂದ ತತ್ತರಿಸುತ್ತಿತ್ತು. ಇದೇ ಸರಿಸಮಯವೆಂದು ಬೀದರ ಸುಲ್ತಾನನು ಅದರ ಮೇಲೆ ದಾಳಿಯನ್ನು ಮಾಡಿ ವಿಜಯನಗರ ಶರಣಾಗುವಂತೆ ಮಾಡಿರುವುದನ್ನು ರಜಾಕನು ಹೇಳಿದ್ದಾನೆ. ಬದುಕುಳಿದವರೆಲ್ಲರೂ ಹಣಕ್ಕಾಗಿ ಮಾರಾಟವಾಡಲ್ಪಟ್ಟಿರುವರೆಂದೂ ಹೇಳಿದ್ದಾನೆ.

**ಮಹೋನ್ನತ ನಗರ :**

ಪೋರ್ಚುಗೀಸ್ ಪ್ರವಾಸಿ ಬಾರ್ಬೋಸಾನ ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ ಇನ್ನೋರ್ವ ಚರಿತ್ರಕಾರ. ವಿಜಯನಗರವು ಇದು ಭಾಗಗಳನ್ನು ಹೊಂದಿರುವುದನ್ನು ಗುರುತಿಸಿರುವನು. ತುಳುನಾಡು, ಚಂಕಾಪುರ, ಕನರಿ, ತಮುಳ ಚೋಳಮಂಡಳ ಇವೇ ಆ ನಾಲ್ಕು ಭಾಗಗಳು. ಐದನೇಯ ಭಾಗ ಯಾವುದೆಂದು ಅವನು ಹೆಸರಿಸಿರುವುದಿಲ್ಲ. ವಿಜಯನಗರ ಬಹುಭಾಷಾ ರಾಜ್ಯವಾಗಿತ್ತಾದರೂ ಕನರೀಸ್ (ಕನ್ನಡ) ಅರಸನ ಮಾತೃಭಾಷೆಯಾಗಿತ್ತೆಂದು ಹದಿನಾರನೇ ಶತಮಾನದಲ್ಲಿ ವಿಜಯನಗರಕ್ಕೆ ಭೇಟಿ ನೀಡಿರುವ ಇನ್ನೋರ್ವ ಪ್ರವಾಸಿ ಹೇಳಿರುವನು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಕ್ಕಿಯನ್ನು ದೀರ್ಘಕಾಲದವರೆಗೆ ಜೋಪಾನವಾಗಿಡಲು ಪೆನಗಾ ಎಂಬ ಮೂಡೆಯಲ್ಲಿ ಕಟ್ಟಿಡುತ್ತಿದ್ದರೆಂದು ಬೋರ್ಬಾಸನು ಹೇಳಿ

ದ್ದಾನೆ. ಅಂದು ಪ್ರಚಲಿತವಿರುವ ಸತಿಪದ್ಧತಿಯನ್ನು ಕಣ್ಣಾರೆ ಕಂಡ ಅವನು ಹೃದಯವಿದ್ರಾವಕವಾಗಿ ಚಿತ್ರಿಸಿರುವನು. ಪತಿಯು ಮರಣಹೊಂದಿದಾಗ ಅವನ ಚಿತೆಯನ್ನು ಸೇರುವ ಪತ್ನಿ ಧರ್ಮಪತ್ನಿ ಎಂದೆನಿಸಿಕೊಳ್ಳುತ್ತಿದ್ದಳು- ಸತಿಯಾಗುವವಳು ನೆಂಟರಿಷ್ಟರನ್ನೊಡಗೂಡಿ ಬಿಳಿಕುದುರೆಯ ಮೇಲೆ ಕುಳಿತುಕೊಂಡು ಮೆರವಣಿಗೆಯಲ್ಲಿ ಚಿತೆಯ ಕಡೆಗೆ ಹೋಗಬೇಕಾಗಿತ್ತು . ಚಿತೆಗೆ ಮೂರು ಸಲ ಪ್ರದಕ್ಷಿಣೆ ಹಾಕಿ ತೊಟ್ಟ ಆಭರಣಗಳನ್ನು ತನಗಿಷ್ಟವಿರುವ ಆಪ್ತೇಷ್ಟರಿಗೆ ಕೊಡುತ್ತಿದ್ದಳು. ಕೇವಲ ತುಂಡು ಬಟ್ಟೆಯೊಂದನ್ನು ತನ್ನದಾಗಿರಿಸಿಕೊಂಡು ನೆಂದವರು ನೀಡಿರುವ ಎಣ್ಣೆಗಡಿಗೆಯನ್ನು ಚಿಂತೆಯಲ್ಲಿ ಸುರಿದು ತನ್ನನ್ನು ತಾನು ಚಿತೆಯಲ್ಲಿ ಧುಮುಕುತ್ತಿದ್ದಳು. ಅವಳ ಚಿತಾಭಸ್ಮವನ್ನು ನದಿಯಲ್ಲಿ ಎಸೆಯುತ್ತಿದ್ದರು. ಸಹಗಮನ ಒಪ್ಪದ ಹೆಂಗಸರ ತಲೆಗೂದಲನ್ನು ಬೋಳಿಸಿ ಮನೆಯಿಂದ ಹೊರಗಟ್ಟುತ್ತಿದ್ದರು- ಅನಂತರ ಅವಳು ದಿಕ್ಕುತೋಚದೆ ವ್ಯಭಿಚಾರಿಯಾಗುತ್ತಿದ್ದಳು. ನಾಡದೊರೆಯು ಮಡಿದಾಗ ಅವನ ಹೆಂಡಂದಿರೂ ಹಾಗೂ ಅನುಚರರೂ ಅವನ ಚಿತೆಯನ್ನು ಸೇರಿ ತಮ್ಮ ಸ್ವಾಮಿನಿಷ್ಠೆಯನ್ನು ತೋರಿಸುತ್ತಿದ್ದರು.

16.ನೇ ಶತಮಾನದಲ್ಲಿ ಪಶ್ಚಿಮ ಕರಾವಳಿಗೆ ಬಂದಿರುವ ಹಾಲೆಂಡ ಪ್ರವಾಸಿ ಅನಸ್ಕೇತನ ತಾನು ಅಲ್ಲಿ ಕಂಡಿರುವ ಕೋಟೆ, ಕೊತ್ತಳ ಹಾಗೂ ಬಂದರುಗಳ ಬಗ್ಗೆ ಬರೆದಿದ್ದಾನೆ. ಹೊನ್ನಾವರ ಬಂದರಿನಿಂದ, ಏಳೆಂಟು ಸಾವಿರ ಕ್ವಿಂಟಲಿನಷ್ಟು ಮೆಣಸು ರಫ್ತಾಗುತ್ತಿತ್ತೆಂದೂ ಈ ಮೆಣಸೆಲ್ಲವೂ ಭಟ್ಕಳದ ಮೆಣಸಿನ ರಾಣಿಗೆ ಸೇರಿರುವ ಸರಕೆಂದೂ ಉಲ್ಲೇಖಿಸಿರುವನು. ಭಟ್ಕಳವನ್ನು ಬಟ್ಕಾಳ ಎಂದು ಹೆಸರಿರುವನು.

ಬೆರ್ನೆ ಎಂಬ ಪ್ರೆಂಚ್ ಪ್ರವಾಸಿ ವಿಜಯನಗರದ ಇಳಿಗಾಲವನ್ನು ಚಿತ್ರಿಸಿರುವನು. ಬಿಜಾಪುರದಲ್ಲಿ ಪ್ರವಾಸ ಮಾಡುತ್ತಾ ಇರಬೇಕಾದರೆ ಕುಡಿಯುವ ನೀರಿನ ಕೊರತೆಯಿಂದಾಗಿ ಉದ್ಭವಿಸಿದ ಧಾರುಣ ಸ್ಥಿತಿಯನ್ನು ಹೇಳಿರುವನು- ಕೋಟೆಯೊಳಗೆ ಮಾತ್ರ ಸಿಹಿನೀರಿನ ವ್ಯವಸ್ಥೆ ಇದ್ದಿತು. ಈ ಅನಾವೃಷ್ಟಿಯ ಪರಿಸ್ಥಿತಿಯ ಲಾಭ ಪಡೆದುಕೊಂಡು, ಶಿವಾಜಿ ಏಳ್ಗೆ ಹೊಂದಿದನೆಂದು ಬೇರ್ನೆ ಅಭಿಪ್ರಾಯವಿತ್ತಿರುವನು.

ಇಟಲಿಯ ಪ್ರವಾಸಿ ಪಿಯೊತ್ರೋ–ದೆಲ್ಲಾ–ವೆಲ್ಲೆ ವಿಜಯನಗರದ ಅಧೀನದಲ್ಲಿ ಇಕ್ಕೇರಿಗೆ ಪ್ರಯಾಣ ಮಾಡಿರುವ ಇವನ ಅನುಭವ ಅತ್ಯಂತ ಸ್ವಾರಸ್ಯಕರ. ರೈತರ ಗುಡಿಸಲನ್ನು ಬಿಟ್ಟರೆ ಇಲ್ಲಿ ಯಾವುದೇ ನಗರ ಇರುವ ಕುರುಹು ಗೋಚರವಾಗುತ್ತಿಲ್ಲವೆಂದು ಹೇಳಿದ್ದಾನೆ. ನಾಡಿನಲ್ಲಿಯೇ ಅಧಿಕ ಪ್ರಮಾಣದಲ್ಲಿ ಮೆಣಸು ಬೆಳಸುವ ಪ್ರದೇಶ ಗೇರುಸೊಪ್ಪೆಯಾಗಿತ್ತೆಂದೂ ಹೇಳಿರುವುನಲ್ಲದೆ ಪೋರ್ಚುಗೀಸರು



ಇಲ್ಲಿಯ ರಾಣಿಯನ್ನು ಮೆಣಸಿನ ರಾಣಿ ಎಂದು ಹೊಗಳಿರುವುದನ್ನು ಹೇಳಿದ್ದಾನೆ. ಇದರ ನೆರೆಯಲ್ಲಿ ಹರಿಯುವ ನದಿಯಾದ ಶರಾವತಿಯನ್ನು ಗೋರ್ಸೊಪಾ ನದಿಯೆಂದು ಹೇಳಿದ್ದಾನೆ. ಇಂಗ್ಲೀಷ್ ಪ್ರವಾಸಿ ಪೀಟರ್, ಮುಂಡಿ ಇಕ್ಕೇರಿಗೆ ಬಂದಾಗ ತಾನು ಅಲ್ಲಿ ಕಂಡಿರುವ ಪ್ರಾಣಿ ಕಾಳಗ, ಡೊಂಬರಾಟ. ಹಾಗೂ ರಥೋತ್ಸವದ ಕುರಿತಾಗಿ ಉಲ್ಲೇಖಿಸಿರುವನು. ಇಕ್ಕೇರಿ ಮಹಾನಗರವಾಗಿತ್ತೆಂದು ಇಲ್ಲಿಯ ಮನೆಗಳಿಗೆ ನೆಲಗಾರ ಹಾಕಿ, ಗೋಡೆಗಳಿಗೆ ಸುಣ್ಣ ಕೆಮ್ಮಣ್ಣುಗಳನ್ನು ಬಳಸುತ್ತಿದ್ದರೆಂದು ಹೇಳಿದ್ದಾನೆ.

ಇಟಲಿಯಿಂದ ಪಲಾಯನ ಮಾಡಿ ಬಂದಿರುವ ಮನೂಜಿ ಎಂಬ ಪ್ರವಾಸಿ ಭಾರತದಲ್ಲಿ ಐದು ದಶಕಗಳವರೆಗೆ ಉಳಿದಿದ್ದನು. ಬಿಜಾಪುರದಲ್ಲಿ ಪ್ಲಾಸ್ಟಿಕ್‌ಸರ್ಜನರು ಇದ್ದರೆಂದು ಹೇಳಿರುವನು. ದೇಹದ ಒಂದು ಭಾಗದ ಚರ್ಮವನ್ನು ತೆಗೆದು ವಿಕೃತಗೊಂಡಿರುವ ಭಾಗಕ್ಕೆ ಅಂಟಿಸಿ, ಔಷಧಿಯ ಚಿಕಿತ್ಸೆಯನ್ನು ನೀಡಿ, ವಿಕೃತಗೊಂಡಿರುವ ಭಾಗವನ್ನು ಸುರೂಪಗೊಳಿಸುತ್ತಿದ್ದರೆಂದು ತನ್ನ ಪ್ರವಾಸ ದಿನಚರಿಯಲ್ಲಿ ಬರೆದಿರುವನು. ಕಂದಾಯ ವಸೂಲಿಯ ಕಾಲದಲ್ಲಿ ರೈತ ಹಾಗೂ ಪಟೇಲರಿಗೆ ನೀಡಲಾಗುತ್ತಿರುವ ಚಿತ್ರಹಿಂಸೆ, ಮತಾಂತರದ ಪಿಡುಗು ಜನತೆಗೆ ಪಗಡೆಯಾಟದ ಮೇಲಿರುವ ಆಸಕ್ತಿ, ಬಾಲವಿವಾಹ, ಸಹಗಮನ ಪದ್ಧತಿ, ಔರಂಗಜೇಬನಿಂದ ದೇವಾಲಯಗಳ ನಾಶ ಅವನು ವಿಧಿಸಿರುವ, ಭಾರವಾದ ತಲೆಗಂದಾಯ, ದಖನಿನಲ್ಲಿ ತಲೆದೋರಿದ ಭೀಕರ ಬರದಿಂದ ಹೊಟ್ಟೆಗಿಲ್ಲದೆ ತಮ್ಮ ಮಕ್ಕಳನ್ನು ಕಾಸಿಗೆ ಮಾರಿರುವುದನ್ನು ಮಾರ್ಮಿಕವಾಗಿಯೂ ಹಾಗೂ ಸ್ವಾರಸ್ಯಕರವಾಗಿಯೂ ಮನೂಜಿ ಬರೆದಿದ್ದಾನೆ.

**ಇತಿಹಾಸ ಕೈಗನ್ನಡಿ :**

ಎಲ್ಲ ಪ್ರವಾಸಿಗಳ ಕಥನಗಳು ಪ್ರಾಚೀನ ಕನ್ನಡಿಗರ ಸಮಗ್ರ ಜೀವನ ಬಿಂಬಿಸುವ ಕೈಗನ್ನಡಿಯೇ ಆಗಿದೆ. ರಾಜರು ಪ್ರಜಾಹಿತ ಚಿಂತಕರಾಗಿದ್ದರು. ಅವರ ಆಡಳಿತ ವ್ಯವಸ್ಥೆಯು ಸುಲಭವಾಗಿಯೂ ನಿಷ್ಪಕ್ಷಪಾತವಾಗಿಯೂ ಇರುತ್ತಿತ್ತು. ಕ್ರೂರ. ಶಿಕ್ಷೆಗಳ ಹೆದರಿಕೆಯಿಂದಾಗಿ ಅಪರಾಧದ ಪ್ರಮಾಣಗಳು ತಗ್ಗಿ ಹೋಗಿದ್ದವು. ಅರಸನೆದುರು ಕಳ್ಳತನದ ಪ್ರಕರಣಗಳು ಬಂದಾಗ ಆ ಪ್ರಾಂತದ ದಳವಾಯಿಯ ಆಸ್ತಿ ಪಾಸ್ತಿಗೆ ಮುಟ್ಟುಗೋಲನ್ನು ಹಾಕಲಾಗುತ್ತಿದ್ದೆಂದು ಪ್ರವಾಸಿ ಪಾರೆಯೇಸ್ ಹೇಳುತ್ತಾನೆ. ಹಿಂದೂ, ಹಾಗೂ ಮುಸ್ಲಿಮರು ಕಟ್ಟುನಿಟ್ಟಾದ ಸಂಪ್ರದಾಯವಾದಿಗಳಾಗಿದ್ದರು. ಪುರೋಹಿತ ಶಾಯಿಯ ಕಪಿಮುಷ್ಠಿಯಲ್ಲಿರುವ ಸಮಾಜದಲ್ಲಿ ಮೂಢ ಪದ್ಧತಿಗಳು ಹೆಪ್ಪುಗಟ್ಟಿದ್ದವು. ಹೊರ ಮತ್ತು ಒಳನಾಡ ವ್ಯಾಪಾರಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು. ರಫ್ತು ವ್ಯಾಪಾರದಲ್ಲಿ ಕನ್ನಡನಾಡು ಸಂಪದ್ಭರಿತವಾಗಿತ್ತೆಂದು ಪ್ರವಾಸಿಗರ ಸರ್ವಸಾಮಾನ್ಯ ಅಭಿಪ್ರಾಯವಾಗಿತ್ತು. ಕನ್ನಡನಾಡಿನ ಸಮಗ್ರ ಇತಿಹಾಸ ರೂಪಿಸುವಾಗ ಬಿರುಕುಗಳು ಕಂಡುಬರುತ್ತಿರುವುದರಿಂದ, ವಿದೇಶಿ ಪ್ರವಾಸಿಗರ ಕಥನಗಳನ್ನು ಅಧ್ಯಯನ ಮಾಡಿ ಸಂಶೋಧನೆಯ ಬೆಳಕನ್ನು ಚೆಲ್ಲಿ ಇತಿಹಾಸದ ಘಟನಾವಳಿಗಳನ್ನು ಸಂಯೋಜಿಸಬೇಕಾಗಿದೆ. ಕನ್ನಡನಾಡಿನ ಚರಿತ್ರಕಾರರೇ ಈ ನಿಟ್ಟಿನಲ್ಲಿ ಗಮನಹರಿಸಬೇಕಾಗಿದೆ.

# ಬಸವಣ್ಣನಾ ನೆನೆಯೊ ನನ ಮನವೆ

● ರಾಜೇಂದ್ರಶಿಶು, 242, ಉತ್ತರಾದಿ ಮಠದ ರಸ್ತೆ, ಮೈಸೂರು-4

ಬಸವಣ್ಣನವರ ದಿವ್ಯ ವ್ಯಕ್ತಿತ್ವವನ್ನು ಅನೇಕ ಕವಿಗಳು ಪ್ರೌಢವಾದ ಭಾಷೆಯಲ್ಲಿ ಪಂಡಿತ ಮಂಡಳಿ ಮೆಚ್ಚುವಂತೆ ಕಾವ್ಯ ರಚಿಸಿದ್ದಾರೆ. ಗಗನಾಂಗಣದಲ್ಲಿ ಬೆಳಗುವ ಅರ್ಕ ಇಳೆಯ ಕತ್ತಲಳಿಸಿ ಬೆಳಕನ್ನು ನೀಡ್ವಂತೆ ಜಗಜ್ಜ್ಯೋತಿಯಾಗಿ ಬಸವಣ್ಣನವರು ಹೇಗೆ ಬೆಳಗಿದರು ಆ ಬೆಳಗಿನ ಬೆಳಗಿನಲ್ಲಿ ಅಸಂಖ್ಯಾತರು ಮಿಂದು ಪುನೀತರಾದ ಬಗೆಯನ್ನು ಬಣ್ಣಿಸಿದರು. ಬಸವಣ್ಣನ ದಿವ್ಯ ಜೀವನ ಅವನ ಅನುದಾನ ಜನಸಾಮಾನ್ಯರಲ್ಲಿ ಭಕ್ತಿ ಭಾವವನ್ನು ಸ್ಫುರಿಸಿದವು.ಬಸವಣ್ಣನ ಬಗೆಗಿದ್ದ ಈ ಭಕ್ತಿ ಭಾವ ಜನಪದ ಗೀತೆಗಳಾಗಿ ಅವರಿಂದ ಹೊರ ಹೊಮ್ಮಿತು.

ಗಂಡು ಮಕ್ಕಳು ಹೊಲದಲ್ಲಿ ಕಳೆಕೀಳುವಾಗ, ನಾಟಿ ಹಾಕುವಾಗ, ರಾಶಿ ಮಾಡುವಾಗ ಈ ಶರಣರನ್ನು ಸ್ತುತಿಸಿ ಹಾಡಿದರೆ ಹೆಣ್ಣು ಮಕ್ಕಳು ರಾಗಿ ಬೀಸುವಾಗ ಇತರ ಕೆಲಸದ ಮಧ್ಯ ಸ್ತುತಿಸಿ ಹಾಡಿದ್ದಾರೆ. ಶತಮಾನಗಳುರುಳಿದರೂ ಅವರ ಬಗೆಗಿದ್ದ ಭಕ್ತಿ ಕಡಿಮೆ ಆಗಿಲ್ಲ. ಆ ಭಕ್ತಿ ಸಜೀವವಾಗಿರಲಿ ಬೆಳಿಗ್ಗೆ ಎದ್ದಾಕ್ಷಣ ಗರತಿ ರಾಗಿ ಕಲ್ಲಿನ ಶೃತಿಯೊಡನೆ ಶರಣರ ಸ್ತುತಿಯ ದನಿ ಸೇರಿಸುತಿದ್ದಳು.

ಬಸವ ರಾಜ್ಯದ ಸಿರಿಯು ಬಸವ ಬಡವರ ನಿಧಿಯು
ಬಸವ ಮಳೆ ಬೆಳೆಯು ನಾಡೊಳಗೆ

ಹೀಗೆ ತನ್ನ ಸರ್ವಸ್ವ ಬಸವನೆಂದು ನಂಬಿಕೆ ಅವರದು. "ದುಡಿವ ಕೈಗೆ ಎಂದೂ ಬಡತನವಿಲ್ಲ". ಎಂಬ ಅರಿವು ಅವರಿಗಿದೆ. "ಕಾಯಕವೇ ಕೈಲಾಸ" "ದುಡಿಮೆಯೆ ದೇವರೆಂದು" ಅರುಹಿದ್ದ ಬಸವಣ್ಣನ ಬಗೆಗೆ ಅಮಿತವಾದ ಭಕ್ತಿ. ಅವನಕೃಪೆಯಿಂದ ಭೂಮಿಯಲ್ಲಿ ಮಳೆ ಬೆಳೆ ಆಗುವುದಂತೆ ಮರ್ತ್ಯ, ಸ್ವರ್ಗವೆನಿಸಿದೆ. ಅಂತೆ ಆಕೆ ಹಾಡುತ್ತಾಳೆ.

"ಬಸವ ಭಕ್ತಿಯ ಬೀಜ, ಬಸವ ಮುಕ್ತಿಯ ತೇಜ
ಬಸವ ಕಾಯಕದ ಗುರುಬೀಜ ! ಶಿವಮತಕೆ
ಬಸವ ಓಂಕಾರ ಶಿವನಾಮ"

ಹೀಗೆ ಕೇವಲ ಮೂರು ಸಾಲಿನಲ್ಲಿ ಬಸವಣ್ಣನ ದಿವ್ಯ ವ್ಯಕ್ತಿತ್ವವನ್ನು ಹಾಡಿದ್ದಾರೆ. ಈ ತ್ರಿಪದಿ ಒಂದು ಕಾವ್ಯ ಬರೆಯುವಷ್ಟು ಅರ್ಥ ಹೊಂದಿರುವುದನ್ನು ಕಾಣುತ್ತೇವೆ.

"ಎಲ್ಲ ದಿಕ್ಕಿನಗಾಳಿ ನಿಲ್ಲದೆಲೆ ಬೀಸ್ಯಾವು
ಕಲ್ಯಾಣದ ಗಾಳಿ ಬಲುಬೀಸಿ । ಎಲ್ಲರೆಕ್ಕಾರೆ ಶಿವನುಡಿಯ"



ಹೀಗೆ ಶಿವನುಡಿಯನ್ನು ಹೊತ್ತು ಕಲ್ಯಾಣ ದಗಾಳಿ ಬೀಸಲು ಕಾರಣ ಬಸಣ್ಣನೆ. ಬಸವಣ್ಣನನ್ನು ಅನು ದಿನವೂ ಅನುಕ್ಷಣವು ಹಾಡಿ ಹೊಗಳಿದ್ದಾರೆ. ಎಷ್ಟು ಹೊಗಳಿದರೂ ತೃಪ್ತಿಯಿಲ್ಲ ಅವರಿಗೆ.

"ಎಲ್ಲ ಬಲ್ಲಿದನಣ್ಣ ಕಲ್ಯಾಣ ಬಸವಣ್ಣ
ಚೆಲ್ಲಿದನು ತಂದು ಶಿವಬೆಳಕ । ನಾಡೊಳಗೆ
ಸೊಲ್ಲೆತ್ತಿ ಜಗವು ಹಾಡುವುದು"

ಹೀಗೆ ಪರಿಪೂರ್ಣ ಜ್ಞಾನಿ ಬಸವಣ್ಣ ಚೆಲ್ಲಿದ ಬೆಳಕು ಎಲ್ಲೆಡೆ ಹರಡಿತಂತೆ. ಆ ಬೆಳಕನ್ನು ಕಂಡು ಅದನ್ನು ಚಿತ್ರಿಸಿರುವ ಬಗೆಯನ್ನು ತಿಳಿಸುವ ಆಶಯ ನನ್ನದು.

ಬಸವಣ್ಣನವರ ಜೀವನವನ್ನು ಪದರು ಪದರಾಗಿ ಬಿಡಿಸಿರುವ ಅದರ ಕುಂಚದಿಂದ ಜೀವನದ ಘಟ್ಟಗಳು ಅಂತೆ ಮೂಡಿ ಬಂದಿದೆ. ಅವರ ಬಾಲ್ಯ. ಕಪ್ಪಡಿಯತ್ತ ಪಯಣ, ವಿವಾಹ, ಮಂತ್ರಿಯಾದ ಬಗೆ, ಅನುಭವ ಮಂಟಪ ಸ್ಥಾಪನೆ, ಅಂತಿಮ ಘಟ್ಟಗಳ ಬಗ್ಗೆ ಒಂದೊಂದು ತ್ರಿಪದಿಯಲ್ಲಿ ಸುಂದರವಾಗಿ ಹೊರ ಮೂಡಿಸಿದ್ದಾರೆ. ಅವರ ಜೀವನದ ಬಗ್ಗೆ ಕವಿಗಳಿಗಿರುವ ಸಮಸ್ಯೆಗಳು ಅವರಿಗಿಲಿ. ನಿಖರವಾಗಿ ಅವರ ಜೀವನ ಚಿತ್ರಣವನ್ನ ಮುಂದಿಡುತ್ತಾರೆ.

"ಹಡೆದವ್ವ ಮಾದವ್ವ ಹಡೆದಪ್ಪ ಮಾದರಸ
ಪಡೆದವ್ವ ಅಕ್ಕನಾಗಾಯಿ ಬಸವಣ್ಣನ
ಬಿಡದೆ ಸಲಹಿದರು. ಪರಸಂಗ"

ಹೀಗೆ ಬಸವಣ್ಣ ಮಾದರಸ ಮಾದಲಾಂಬಿಕೆ ಮತ್ತು ಅಕ್ಕ ಅಕ್ಕನಾಗಮ್ಮನ ಮಮತೆ ತೊಟ್ಟಿಲಲಿ ಬೆಳೆದನಂತೆ. ಆತನ ಬಾಲ್ಯದ ವಿದ್ಯಾಭ್ಯಾಸ ಸಂಗಮದಲ್ಲಿ ಆಯಿತಂತೆ. "ಬಸವ ವಿದ್ಯೆಯ ಕಲಿತ ಎಸೆವ ಸಂಗಮದೊಳಗೆ ಅಲ್ಲಿ ಆತನಿಗೆ ವೇದಾಗಮ ಉಪನಿಷತ್ತುಗಳು ಕರತಲಾಮಲಕ ವಾದವು.

"ಓದಿದನು ಬಸವಯ್ಯ ವೇದದೊಳಗಿನ ಹುಸಿಯ
ಬೇಧ ಬೇಧವನು ಬಿಚ್ಚಿಟ್ಟ ಜಗಕೆ"

ಹೀಗೆ ತಾನು ಕಂಡ ಸತ್ಯವನ್ನು ಜಗತ್ತಿನ ಮುಂದಿಟ್ಟ. ಆತನ ಕೀರ್ತಿಯ ಕಂಪು ದಶದಿಕ್ಕಿನಲ್ಲರಡಿ ಕಲ್ಯಾಣದತ್ತ ಪಸರಿಸಿತು. ಆತನ ಕೀರ್ತಿ ಬಿಜ್ಜಳನಿಗೆ ತಿಳಿಯಿತಂತೆ.

ಬಿಜ್ಜಳನು ಕೇಳಿದನು ದರ್ಜೆ ಬಸವನ ಮಾತ
ಅಜ್ಜಯ್ಯನೂರು ಸಂಗಮಕೆ ಕರೆತರಲು
ಮರ್ಜಿಯಲಿ ಬಂದ ಬಲದೇವ

ಹೀಗೆ ಬಸವನ ಕೀರ್ತಿ ಕೇಳಿ ಬಲದೇವ ಬಂದು ಆತನ ಜ್ಞಾನದೀಪ್ತಿ ಪ್ರಕಾಂಡ ಪಾಂಡಿತ್ಯಕ್ಕೆ ಮೆಚ್ಚಿದನು.

ಮೆಚ್ಚಿದನು "ಬಲದೇವ ಇಚ್ಛೆಯಲ್ಲಿ ಮಗಳಿತ್ತ" ಅತನನ್ನ ಮೆಚ್ಚಿ ತನ್ನ ಮಗಳನ್ನೆ ಕೊಟ್ಟನಂತೆ ಹೀಗೆ ಬಸವಣ್ಣನ ವಿವಾಹವೂ ಆಯಿತು.

ಮುಂದೆ ಬಸವ ಕಲ್ಯಾಣಕ್ಕೆ ಬಂದುದು ಮಂತ್ರಿ ಪದವಿ ಸ್ವೀಕಾರ. ಅನುಭವ ಮಂಟಪ ಸ್ಥಾಪನೆ ಇವುಗಳನ್ನು ಮೂರುಸಾಲಿನಲ್ಲಿ ಮನೋಜ್ಞವಾಗಿ ಬಿತ್ತರಿಸಿದ್ದಾರೆ.

"ಸಾಗಿ ಬಸವನು ಬಂದು ತೂಗಿದನ ಕಲ್ಯಾಣ
ಹಾಗಿನಲಿ ಕಟ್ಟಿ ಅನುಭಾವ ಮಂಟಪದ
ಕೂಗು ಕೇಳುತಲಿ ಜನವೆದ್ದು"

ಹೀಗೆ ಅನುಭವ ಮಂಟಪವನ್ನು ಸ್ಥಾಪಿಸಿದ. ಅದರ ಕೀರ್ತಿ ಎಲ್ಲ ದಶದಿಕ್ಕುಗಳಲ್ಲಿ ಪಲ್ಲವಿಸಿ ಸೌಸವವನ್ನ ಪಸರಿಸಿತು . ಹಾಗೆ ಅನೇಕ ಶರಣರು ಕಲ್ಯಾಣಕ್ಕೆ ಧಾವಿಸಿದರು. ಕಲ್ಯಾಣದ ಕಾಯಕ ಜೀವಿಗಳ ಬೀಡಾಯಿತು- ಅವಿಮುಕ್ತ ಕ್ಷೇತ್ರವಾಯಿತು ದಾಸೋಹ ತಾಣವಾಯಿತು.

"ಉಂಡು ತೇಗಿತು ಲೋಕ ಕೊಂಡಾಡಿ ಕಾಯಕದ
ಕಂಡ ಕಂಡಲ್ಲಿ ದಾಸೋಹ ಕಾಯಕದ
ಕಂಡ ಜೀವನದ ಶಿವಮಾತು"

ಮಹಾಮನೆಯ ದಾಸೋಹ ಕಾಯಕದ ಬೆಳಕು ಎಲ್ಲೊಡೆ ಪ್ರಜ್ವಲಿಸಿ ಅಣ್ಣನ ಮಹಾಮನೆ ಕೀರ್ತಿ ನಾಡಿನಾದ್ಯಂತ ಹಬ್ಬಿತು. ಅಸಂಖ್ಯಾತ ಶರಣರು ಕಲ್ಯಾಣಕ್ಕೆ ಬಂದರು.

ಅಲ್ಲಮನು ಸಿದ್ಧರಾಮ ಬಲ್ಲಿದರೆಲ್ಲರು ಬಂದು
ಕಲ್ಯಾಣಮನೆಗೆ ಕಳೆಬಂತು ಬಸವಣ್ಣ
ಎಲ್ಲಿ ಹೋದಲ್ಲಿ ಚೆಲ್ಲಾದ"

ಹೀಗೆ ಕಲಾಣ್ಯಕ್ಕೆ ಅಲ್ಲಮ, ಸಿದ್ಧರಾಮ ಬರಲು ಅಲ್ಲಿ ಕಳೆಯೇರಿತಂತೆ. ಅಷ್ಟೆ ಅಲ್ಲ. "ಹಿಪ್ಪರಗಿ ಮಾಚಯ್ಯ, ಅಪ್ಪ ಹರಳಯ್ಯ ಮುಂತಾದವರು ಅನುಭವ ಮಂಟಪಕ್ಕೆ ಬಂದು ಸೇರಿದರು. ಅನುಭವ ಮಂಟಪ ಕೀರ್ತಿಲತೆ ಪಲ್ಲವಿಸಿತು. ಆ ಅನುಭವ ಮಂಟಪಕೆ ಅಲ್ಲಮನು ಗುರುವಾದ ಹೀಗೆ ತೊಳಗಿ ಬೆಳಗುತ್ತಿರುವಾಗ ಕಲ್ಯಾಣ ಕ್ರಾಂತಿಗೆ ಕಾರಣವಾದ ಒಂದು ಘಟನೆ ನಡೆಯುತ್ತದೆ. ಅದೇ ಹರಳಯ್ಯ ಮಧುವಯ್ಯಗಳ ಸಂಬಂಧ.

"ಕಾಯಕದ ಮದುವಯ್ಯ ಊರಮಾತನು ಮೀರಿ
ಧಾರೆ ಎರೆದಿತ್ತ ಮಗಳನ್ನು ಬೀಗಾದ
ಮಾದಾರ ಭಕ್ತ ಹರಳಂಗೆ"



ಹೀಗೆ ಹಾರುವರ ಮಧುವರಸ, ಮಾದಾರ ಹರಳಂಗೆ ಬೀಗನಾಗಲು ಕಲ್ಯಾಣಕ್ರಾಂತಿ ಉಂಟಾಯಿತು. ಪರವಾದಿಗಳ ನುಡಿಗೆ ಬಿಜ್ಜಳನು ಬಸವಣ್ಣನನ್ನು ಕರೆಸಿ ವಿಚಾರಿಸಿದ, ಬಸವಣ್ಣ ಸಮರ್ಥಿಸಿದರು. ಬಿಜ್ಜಳ ಚಾಡಿ ಮಾತಿಗೆ ಕಿವಿಗೊಡುತ್ತಾನೆ. ಬಸವಣ್ಣನ ಮಾತನ್ನು ಮರೆತು ಭಕ್ತರನ್ನು ಶಿಕ್ಷಿಸುತ್ತಾನೆ. ಬಸವಣ್ಣ ನೊಂದು ಸಂಗಮಕ್ಕೆ ಹೊರಡುತ್ತಾನೆ. ಅಲ್ಲಿ

"ಹರಹರನೆ ಹರಸಂಗ ಗುರು ಎನಗೆ ನರಸಂಗ
ಕರುಣಾ ನಿಧಿ ಹರನೆ ಸಂಗಮನೆ ಎಂದೆನುತ
ಕರಮುಗಿದು ಬಸವ ಬಯಲಾದ" – ಹೀಗೆ.

ಮೂರು ಸಾಲಿನಲ್ಲಿ ಬಸವಣ್ಣ ಸಂಗಮಕ್ಕೆ ಬಂದುದು ಅಲ್ಲಿ ಸಂಗನೊಳು ಬಯಲಾದುದನ್ನು ವರ್ಣಿಸಿದ್ದಾನೆ. ಹೀಗೆ ಯಾವ ಅಡಂಬರವಿಲ್ಲದೆ ವರ್ಣನೆ ವೈಭವಗಳ ಹಾವಳಿ ಇಲ್ಲದೆ ಸಹಜವಾಗಿ ನೇರವಾಗಿ ಅಣ್ಣನ ಜೀವನವನ್ನು ಒಡಮೂಡಿಸಿದ್ದಾರೆ.

ಹೀಗೆ ಹಗಲಿರುಳು ಬಸವನ ಗುಣಗಾನ, ಮಾಡಿದರೂ ತೃಪ್ತಿಯಿಲ್ಲ. ಕಲ್ಯಾಣಕ್ಕೆ ಹೋಗಿಬಂದರೆ ಕಾಶಿಗೆ ಹೋದ ತೃಪ್ತಿ ಅವರಿಗೆ.

"ಕಲ್ಯಾಣ ಪಟ್ಟಣಕ್ಕೋಗಿ ಎಲ್ಲದೇವರಕಂಡೆ
ಬಲ್ಲಿದನ ಕಂಡೆ ಬಸವಣ್ಣನ ಗುರುವೆ

ಚೆಲ್ಲಾಡಿ ಬಂದೆ ನನ ಮನವು" :– ಹೀಗೆ ಕಲ್ಯಾಣದಲ್ಲಿ ಬಸವಣ್ಣನನ್ನು ಕಂಡು ತನ್ನ ಮನ ಚೆಲ್ಲಾಡಿ ಬಂದಿದ್ದಾರೆ. ಭಕ್ತಿ ಭಾವ ಇಲ್ಲಿ ಸ್ಫುರಿಸಿದೆ ಅಂತೆ ಗರತಿ ತನ್ನ ಮನೆಗೂ ಅವರನ್ನು ಆಹ್ವಾನಿಸಿದ್ದಾಳೆ.

ಶರಣಾರ ನೆನೆದಾರೆ ಸರಗೀಯ ಇಟ್ಟಾಂಗ
ಅರಳು ಮಲ್ಲೀಗೆ ಮುಡಿದ್ಹಾಂಗ ಕಲ್ಯಾಣ

ಶರಣಾರ ನೆನೆಯೊ ನನಮನವೆ" ಹೀಗೆ ಹೇಳುವ ಆಕೆ ಸತತವಾಗಿ ಅವರನ್ನು ಸ್ಮರಿಸಿದ್ದಾಳೆ. ಕರುಣ ಬಂದರೆ ಕಾಯೊ ಮರಣ ಬಂದರೆ ಒಯ್ಯೊ ಕರುಣಿ ಕಲ್ಯಾಣ ಬಸವಣ್ಣ ಕಾಶಿಲಿಂಗ ಕಡೆತನಕ ಕಾಯೋ ಅಭಿಮಾನ ಎಂದು ಬೇಡಿದ್ದಾಳೆ. ಹೀಗೆ ಬಸವಣ್ಣನಿಲ್ಲದೆ ಅನ್ಯದೇವ ಅವಳಿಗಿಲ್ಲ.

ಹೀಗೆ ಬಸವಣ್ಣನನ್ನು ಅನವರತ ಸ್ಮರಿಸಿ ಹಾಡುವ ಅವರಿಗೆ ಬಸವಣ್ಣನ ವ್ಯಕ್ತಿತ್ವವನ್ನು ಎಷ್ಟು ಸ್ತುತಿಸಿದರೂ ತೃಪ್ತಿಯಿಲ್ಲ. ಯಾವ ಕಾವ್ಯ ಪ್ರೌಢಿಮೆಗೂ ಕಡಿಮೆ ಇಲ್ಲದಂತೆ ರಚಿಸಿರುವ ಈ ಗೀತೆಗಳು ಜನಮನದಲ್ಲಿ ಇಂದಿಗೂ ಅಚ್ಚಳಿಯದೆ ಉಳಿದಿದೆ.

ಬಸವಾನ ನೆನೆದಾರೆ ಹಸನಾಗಿ ಬಾಳೆಲ್ಲ
ಒಸೆದು ಪೂಜಿಸಿರೆ ಕಷ್ಟಾವು ಕಡೆಯಾಗಿ
ಬಸವಾನ ನೆನೆಯೋ ನನ ಮನವೆ.

# ವಿಶ್ವದಲ್ಲಿ ಭಾರತೀಯ ಸಂಸ್ಕೃತಿ-7.

ಎಚ್. ಎಸ್ . ನರಸಿಂಹಜೀಯರ್, ಲಕ್ಷ್ಮಯ್ಯನ ತೋಟ, 14ನೇ ಕ್ರಾಸ್, ಸೋಮೇಶ್ವರಪುರಂ
ತುಮಕೂರು-2.

ಈಗಿನ ಆಫ್ಘಾನಿಸ್ಥಾನವು ಮುಸಲ್ಮಾನರದೇಶ. ಹಿಂದೆ ಈ ದೇಶದಲ್ಲಿ ಬಹುಮಂದಿ ಬೌದ್ಧ ಮತಾವಲಂಬಿಗಳಾಗಿದ್ದರು. ಅದಕ್ಕೂ ಹಿಂದೆ ಅಂದರೆ ಬುದ್ಧನ ಕಾಲಕ್ಕೂ ಪೂರ್ವದಲ್ಲಿ ಇದು ಆರ್ಯಾವರ್ತದ ಒಂದು ಪ್ರಾಂತವಾಗಿತ್ತೆಂದು ತಿಳಿದು ಬಂದಿದೆ.

ಸರಿ ಸುಮಾರು ಹತ್ತು ಶತಮಾನಗಳ ಹಿಂದೆಯೇ ಆಫ್ಘಾನಿಸ್ಥಾನವು ಮುಸಲ್ಮಾನರ ದೇಶವಾಯಿತು. ಆದರೂ ಅಲ್ಲಿಯ ವಿದ್ಯಾಭ್ಯಾಸ ಕ್ರಮದಲ್ಲಿ ಸಂಸ್ಕೃತ ಅಧ್ಯಯನವನ್ನು ಕಡ್ಡಾಯ ಮಾಡಿದ್ದಾರೆ. ಕಾಬೂಲಿನಲ್ಲಿರುವ ವಿಶ್ವವಿದ್ಯಾನಿಲಯದಲ್ಲಿನ ಸಾಹಿತ್ಯ ವಿಭಾಗದಲ್ಲಿನ ಪುಷ್ಟು ಭಾಷೆ ಮತ್ತು ಪರ್ಷಿಯನ್ ಭಾಷೆಗಳನ್ನು ವ್ಯಾಸಂಗ ಕ್ರಮದಲ್ಲಿ ಸೇರಿಸಿದ್ದಾರೆ. ಅವರ ಭಾಷೆ ಪುಷ್ಟು ಮತ್ತು ಈ ಭಾಷೆಗೆ ಸಂಸ್ಕೃತ ಭಾಷೆಯು ಮಾತೃ ಪ್ರಾಯವೆಂದು ತಿಳಿದಿರುವುದಲ್ಲದೇ ಪರ್ಷಿಯನ್ ಭಾಷೆಗೂ ಸಂಸ್ಕೃತ ಭಾಷೆಗೂ ಸಂಬಂಧವಿದೆಯೆಂದು ಅರಿತು ಸಂಸ್ಕೃತ ಭಾಷಾ ವ್ಯಾಸಂಗಕ್ಕೆ ಅವಕಾಶವನ್ನು ಸರ್ಕಾರ ಕಲ್ಪಿಸಿದೆ. ವಾರಕ್ಕೆ ಮೂರು ವೇಳೆಗಳಂತೆ ನಾಲ್ಕು ವರ್ಷ ಸಂಸ್ಕೃತ ಕಲಿಯುವಂತೆ ನಿರ್ಬಂಧ ವಿಷಯವನ್ನಾಗಿ ಮಾಡಿದ್ದಾರೆ.

ಮೊದಲನೇ ವರ್ಷ ಸಂಸ್ಕೃತ ಲಿಪಿಯ ವಾಚನ ಲೇಖನ ಬಾಲ ವ್ಯಾಕರಣ ಮತ್ತು ಸುಲಭವಾದ ಪಾಠಗಳು. ನಂತರ ವರ್ಷದಲ್ಲಿ ಉಕ್ತಲೇಖನ, ಭಾಷಾಂತರ, ಸಂಭಾಷಣೆ, ವ್ಯಾಕರಣ ಹಾಗೂ ಭಗವದ್ಗೀತೆಯ ಮೊದಲನೆಯ ನಾಲ್ಕು ಅಧ್ಯಯನಗಳ ಶ್ಲೋಕ ಪಠಣಂ ಮೂರನೆಯ ವರ್ಷ ಸಂಸ್ಕೃತದ ಸಾಹಿತ್ಯ ಚರಿತ್ರೆ, ನಾಟಕ ಗ್ರಂಥಗಳು ಹಾಗೂ ಗೀತೆಯ ಕೆಲವು ಅದ್ಯಾಯಗಳ ಪಠಣ. ನಾಲ್ಕನೆಯ ವರ್ಷದಲ್ಲಿ ಗೀತೆಯ ಉಳಿದ ಅಧ್ಯಾಯಗಳು ಹಾಗೂ ಪ್ರೌಢ ನಾಟಕಗಳು, ಅಲಂಕಾರ ಮತ್ತು ಸಾಹಿತ್ಯ-ಇವುಗಳ ಬಗ್ಗೆ ತಿಳುವಳಿಕೆ. ಅಲ್ಲದೆ ಈ ವಿಶ್ವವಿದ್ಯಾಲಯದಲ್ಲಿ ಒಂದು ಸಂಸ್ಕೃತ ಭಂಡಾರವೂ ಇದೆಯೆಂದು ತಿಳಿದು ಬಂದಿದೆ. ತಾವುಆರ್ಯರೆಂದು ಸಮರ್ಥಿಸಿಕೊಳ್ಳಲು "ಆರ್ಯನ" ಎಂಬ ಮಾಸಪತ್ರಿಕೆಯನ್ನೂ ನಡೆಸುತ್ತಿದ್ದಾರೆ. ಮುಸಲ್ಮಾನರ ರಾಜ್ಯವಾದ ಆಫ್ಘಾನಿಸ್ತಾನದಲ್ಲಿ ಸಂಸ್ಕೃತ ಭಾಷೆಗೆ ಇಷ್ಟೊಂದು ಪ್ರಾಶಸ್ತ್ಯವಿರುವುದನ್ನು ನೋಡಿದರೆ, ಭಾರತೀಯ ಸಂಸ್ಕೃತಿ ವಿಶ್ವದಲ್ಲಿ ಹರಡಿದೆ ಎಂದು ಹೇಳಿಕೊಳ್ಳುವ ನಮಗೇ ನಾಚಿಕೆಯಾಗಬೇಕಲ್ಲವೆ! ಈ ಎಲ್ಲಾ ವಿವರಗಳನ್ನೂ ಡಾ|| ರಘುವೀರ ಎಂಬುವರು ಮಾರ್ಚಿ 6, 1949ರ Indian News Chronicle ನಲ್ಲಿ ಪ್ರಶಂಶಿಸಿದ್ದಾರೆ ಎಂದು ಡಿ.ವಿ.ಜಿಯವರು ಹೇಳಿದ್ದಾರೆ.



ಪಾಶ್ಚಾತ್ಯ ವಿದ್ವಾಂಸರಾದ Will Durantರವರು ಹೇಳಿರುವಂತೆ "India was the mother of our race and Sanskrit the mother of European languages........................" ಎಂದಿರುವಂತೆ ಸಂಸ್ಕೃತ ಭಾಷೆಯು ಅನೇಕ ಯೂರೋಪಿಯನ್ ಭಾಷೆಗಳಿಗೆ ಮಾತೃಭಾಷೆಯಾಗಿದೆ. ಈಗಲೂ ನಾವು ಗ್ರೀಕ್ ಲ್ಯಾಟಿನ್ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಅನೇಕ ಸಂಸ್ಕೃತ ಪದಗಳ ಮೂಲವನ್ನು ನೋಡಬಹುದಾಗಿದೆ. Eg ಮಾತೃ Mother ಪಿತೃ-Father ಭಾತೃ·Brother, ತೃತೀಯ-Three ಷಷ್ಠಿ-Six, ಸಪ್ತಮಿ-September ಅಷ್ಟಮಿ-Eight October, ನವಮಿ-Nine-November, ದಶಮಿ-December ಹೀಗೆ ನೂರಾರು ಪದಗಳ ಸಾಮಿಪ್ಯವನ್ನು ಸಂಶೋಧಕರು ತೋರಿಸಿಕೊಟ್ಟಿದ್ದಾರೆ. ಹೀಗೆ ಸಂಸ್ಕೃತವು ಅನೇಕ ಭಾಷೆಗಳಿಗೆ ಮಾತೃಪ್ರಾಯವಾಗಿದೆ.

ಸಂಸ್ಕೃತವೇ ಭಾತರದ ಪ್ರಥಮ ಪ್ರತಿಷ್ಠೆ ಹಾಗೂ ಭಾರತೀಯ ಸಂಸ್ಕೃತಿಯೇ ಎರಡನೆಯ ಪ್ರತಿಷ್ಠೆ ಎಂಬುದನ್ನು 'ಭಾರತಸ್ಯ ಪ್ರತಿಷ್ಠೇ ದ್ವೇ ಸಂಸ್ಕೃತಂ ಸಂಸ್ಕೃತಿಸ್ತಥಾ" ಎಂಬ ಶ್ಲೋಕವನ್ನು ಉದ್ಧರಿಸುತ್ತಾ "ಅಸ್ತಿಮಾ" ಮಾಸಪತ್ರಿಕೆಯ ಸಂಪಾದಕರಾದ ಸೋ.ನಾ. ಭಟ್ಟರು ತಮ್ಮ ಮೇ 96ರ ಸಂಪಾದಕೀಯದಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಈ ಪತ್ರಿಕೆಯಲ್ಲಿನ ಇನ್ನು ಕೆಲವು ವಿವರಗಳನ್ನು ಮುಂದೆ ಕೊಡಲಾಗಿದೆ.

ಬ್ರಹ್ಮಸಾಕ್ಷಾತ್ಕಾರದ ಮೂಲಕ ಸಾಧಕನ ಶ್ರೇಯಸ್ಸಿಗೆ ಸಾಧನವಾದ ಪರಾವಿದ್ಯೆ ಹಾಗೂ ಐಹಿಕ ಸುಖಭೋಗಕ್ಕೆ ಸಾಧನವಾದ ಅಪರಾವಿದ್ಯೆ ಈ ಎರಡೂ ವಿದ್ಯೆಗಳು ಸಂಸ್ಕೃತ ಭಾಷಯಲ್ಲಿ ಅಡಗಿವೆ. ಆದ್ದರಿಂದ ಇವುಗಳ ಜ್ಞಾನ ವಿಜ್ಞಾನಗಳನ್ನು ಅರಿತ ಅನೇಕ ಪಾಶ್ಚ್ಯತ್ಯದೇಶಗಳು ಸಂಸ್ಕೃತ ಅಧ್ಯಯನವನ್ನು ತಮ್ಮ ವ್ಯಾಸಂಗ ಕ್ರಮದಲ್ಲಿ ಅಳವಡಿಸಿಕೊಂಡಿವೆ.

ಜರ್ಮನಿದೇಶದ ಷೀಗಲ್ ಸಹೋದರರು 1762ರಷ್ಟು ಹಿಂದೆಯೇ ಸಂಸ್ಕೃತದ ಬಗ್ಗೆ ಆಸಕ್ತಿ ತಳೆದು ಸಂಸ್ಕೃತ ಭಾಷಾ ಸಾಹಿತ್ಯವನ್ನು ತಿಳಿಯಲು ಪ್ರಯತ್ನಿಸಿದರು. 1818ರಲ್ಲಿ ಬಾನ್ ವಿಶ್ವವಿದ್ಯಾ ನಿಲಯದಲ್ಲಿ ನೇಮಿಸಲ್ಪಟ್ಟ ಪ್ರಪ್ರಥಮ ಸಂಸ್ಕೃತ ಪ್ರೊಫೆಸರ್ ಎಂದರೆ ಆಗಸ್ಟ್‌ವಿಲ್ ಹೆಲ್ಮ್‌ಷೀಗಲ್‌ರವರು. 18 ನೆಯ ಶತಮಾನದಲ್ಲಿಯೇ ಜರ್ಮನಿಯ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲಿ ಸಂಸ್ಕೃತವು ಐಚ್ಛಿಕ ವಿಷಯವಾಗಿ ಅಂಗೀಕಾರವಾಯಿತು. ಅತಿ ಮಹತ್ವದ ಕೊಡುಗೆಯನ್ನು ಕೊಟ್ಟ ಜರ್ಮನ್ ವಿದ್ವಾಂಸರಲ್ಲಿ ಪ್ರಮುಖರೆಂದರೆ ಪ್ರೊ|| ಮ್ಯಾಕ್ಸ್‌ಮುಲ್ಲರ್. ಭಾರತೀಯ ದರ್ಶನ ಶಾಸ್ತ್ರಗಳು, ವೇದ ಉಪನಿಷತ್ತುಗಳ ಬಗ್ಗೆ ಇವರು ಅಧ್ಯಯನ ಮಾಡಿ ಇಂಗ್ಲಿಷ್‌ನಲ್ಲಿ ಬರೆದಿರುವ ಲೇಖನಗಳು ಮತ್ತು ಗ್ರಂಥಗಳು ಈಗಲೂ ಮಹತ್ವಪೂರ್ಣ ದಾಖಲೆಗಳಾಗಿವೆ.

ಬರ್ಲಿನ್, ಗಟಿಂಜನ್ ಮತ್ತು ಇನ್ನೂ ಹನ್ನೆರಡು ಪ್ರಮುಖ ಜರ್ಮನ್ ವಿಶ್ವವಿದ್ಯಾನಿಲಯಗಳಲ್ಲಿ ಭಾರತೀಯ ಶಾಸ್ತ್ರಗಳ ಅಧ್ಯಯನ ಪೀಠಗಳು ಪ್ರಸಿದ್ಧವಾಗಿವೆ. ಬೆಲ್ಜಿಯಂಗಳಲ್ಲಿ 150 ವರ್ಷಗಳಿಂದ ಸಂಸ್ಕೃತವನ್ನು ಬೋಧಿಸಲಾಗುತ್ತಿದೆ. ನಾಲ್ಕು ವಿಶ್ವವಿದ್ಯಾನಿಲಯಗಳಲ್ಲಿ ಸಂಸ್ಕೃತದ ಅಧ್ಯಯನ ನಡೆಸಲಾಗುತ್ತಿದೆ. ಜರ್ಪಾದೇಶದಲ್ಲಿ ಪ್ರಸಕ್ತ ಎಂಟು ರಾಷ್ಟ್ರೀಯ ವಿಶ್ವವಿದ್ಯಾಲಯಗಳಲ್ಲಿ ಹಾಗೂ 20 ಬೌದ್ಧರ ಕಾಲೇಜುಗಳಲ್ಲಿ ಸಂಸ್ಕೃತವನ್ನು ಅಳವಡಿಸಲಾಗಿದೆ. ಪೋಲೆಂಡ್‌ನಲ್ಲಿ 1806 ರಲ್ಲಿಯೇ ವಾಲೆಂಟಿಮೆಜೆವಿಸ್ಕಿ ಎಂಬುವರು ಸಂಸ್ಕೃತ ಅಭ್ಯಸಿಸಿ ಪೋಲಿಷ್ ಮತ್ತು ಸಂಸ್ಕೃತ ಭಾಷೆಗಿರುವ ಸಾಮ್ಯಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ.

ಅಮೆರಿಕಾದ ಹಾರ್ವಾರ್ಡ್ ವಿಶ್ವವಿದ್ಯಾನಿಲಯದಲ್ಲಿ ಬಿ.ಎ.ಎಂ.ಎ.,ಪಿ.ಎಚ್‌ಡಿ ಅಧ್ಯಯನಕ್ಕೆ ಸಂಸ್ಕೃತ ವಿಭಾಗದಲ್ಲಿ ಅವಕಾಶವಿದೆ. ಧರ್ಮ, ತತ್ವಜ್ಞಾನ, ಭಾಷಾ ವಿಜ್ಞಾನ, ಸಂಪ್ರದಾಯ ಹಾಗೂ ಪರಂಪರೆ-ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದ ಅಧ್ಯಯನಕಾರರಿಗೆ ಸಂಸ್ಕೃತ ಕಡ್ಡಾಯ ಮಾಡಿದ್ದಾರೆ. ಜ್ಯೂರಿಚ್‌ನಲ್ಲಿ ಭೌತ ವಿಜ್ಞಾನ, ಖಗೋಲ ಶಾಸ್ತ್ರ ಹಾಗೂ ಮನಃಶಾಸ್ತ್ರ ಸಂಬಂಧ ಅಧ್ಯಯನಕ್ಕೆ ಸಂಬಂಧಿಸಿದ ವೇದ-ವೇದಾಂತ ಯೋಗ, ಸಾಂಖ್ಯ ಮುಂತಾದ ಭಾರತೀಯ ತತ್ವಗಳೇ ಆಧಾರ.

ಕೆನಡಾದ ಟೊರೆಂಟೋ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಅಧ್ಯಯನ ವಿಭಾಗದಲ್ಲಿ ಏಳಕ್ಕಿಂತಲೂ ಹೆಚ್ಚು ಸಂಸ್ಕೃತ ಅಧ್ಯಾಪಕರಿದ್ದಾರೆ.

ರಷ್ಯಾದ ಮಾಸ್ಕೋ ವಿಶ್ವವಿದ್ಯಾನಿಲಯದಲ್ಲಿ ಹಾಗೂ ಲೆನಿನ್‌ಗಾಡ್‌ನಲ್ಲಿ ಸಂಸ್ಕೃತ ತರಗತಿಗಳು ನಡೆಯುತ್ತಿವೆ, ಲಂಡನ್‌ನ ಸೈಂಟ್ ಜೇಮ್ಸ್ ಇಂಡಿಪೆಂಡೆಂಟ್ ಸ್ಕೂಲ್‌ನಲ್ಲಿ ಪ್ರಾಥಮಿಕ ತರಗತಿಗಳಲ್ಲೇ ಸಂಸ್ಕೃತ ಕಲಿಸಲಾಗುತ್ತದೆ. ವೇದ ಸ್ತುತಿಗಳಿಂದ ಅಲ್ಲಿ ತರಗತಿಗಳು ನಿತ್ಯ ಪ್ರಾರಂಭವಾಗುತ್ತವೆ.

ಚೀನಾದಲ್ಲಿ ಬೌದ್ಧರ ಕೃತಿಗಳ ಅನುವಾದದ ಮೂಲಕ ಸಂಸ್ಕೃತ ಅಧ್ಯಯನ ಪ್ರಾರಂಭವಾಯಿತು. ಈಗ ಭಾರತೀಯ ಸಾಹಿತ್ಯದ ಅಧ್ಯಯನ ಹಲವಾರು ವಿಶ್ವವಿದ್ಯಾನಿಲಯಗಳಲ್ಲಿ ನಡೆಯುತ್ತಿದೆ.

ಅಮೆರಿಕಾ, ಯೂರೋಪ್, ಏಷ್ಯಾ ಮತ್ತು ಆಸ್ಟ್ರೇಲಿಯಾದ ಸುಮಾರು ಮೂವತ್ತೈದಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ವಿಜ್ಞಾನ, ತತ್ವಜ್ಞಾನ, ಸಂಸ್ಕೃತಿ ಹಾಗೂ ಭಾಷಾಶಾಸ್ತ್ರ ಇತ್ಯಾದಿ ವಿಷಯಗಳ ಅಧ್ಯಯನಕ್ಕಾಗಿ ಸಂಸ್ಕೃತ ಬಳಸಲಾಗುತ್ತಿದೆ.

ಅರಬ್ ದೇಶಗಳಾದ್ಯಂತ ಹಿಂದೂ ಸಂಸ್ಕೃತಿಯ ಕುರುಹುಗಳು ಹರಡಿವೆ. ಮಹಾಭಾರತದ ಯುದ್ಧ ಮುಗಿದನಂತರ ಹಲವು ಕೌರವ ಪಕ್ಷದ ಜನರು ತಮ್ಮ



ಸೋದರಮಾವನ ಊರಾದ ಕಾಂದಹಾರ್‌ಗೆ ಓಡಿಹೋದರು. ನಂತರದ ಸಂತಾನದ ಹಲವರು ಆಪ್ಘಾನಿಸ್ಥಾನದಿಂದಾಚೆಗೆ ಈಗಿನ ಮೆಸಪೊಟೋಮಿಯಾ ಕಡೆಗೂ ಧಾವಿಸಿದರು. ಐದು ಕುದುರೆಗಳು ಅಲ್ಲಿ ದೊರೆತವು. ಆ ನಾಡಿಗೆ ಅರ್ವಸ್ಥಾನ ಎಂದು ಹೆಸರಿಟ್ಟರು. (ಅರ್ವ-ಕುದುರೆ, ಸ್ಥಾನ-ಭೂಮಿ) ಅದೇ ಈಗಿನ ಅರಬ್‌ಸ್ಥಾನವೆಂದು ಹೇಳುತ್ತಾರೆ.

ಸೌದಿ ಆರೇಬಿಯಾ ದೇಶವು ರಾಧಾ-ಕೃಷ್ಣರ ನರ್ತನದ ಅಂಚೆ ಚೀಟಿ ಮುದ್ರಿಸಿದೆ. ಸೀತೆಯು ಅಶೋಕ ವನದಲ್ಲಿರುವ ಚಿತ್ರವನ್ನೂ ಮುದ್ರಿಸಿದೆ. ಸಿರಿಯಾ ದೇಶವು ಕೃಷ್ಣನು ಅರ್ಜುನನಿಗೆ ಉಪದೇಶಿಸುವ ಅಂಚೆ ಚೀಟಿ ಮುದ್ರಿಸಿದೆ. ಈಜಿಪ್ಟ್ ದೇಶವು ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಎಂಟು ಚಿತ್ರಗಳನ್ನು ಮುದ್ರಿಸಿದೆ. ಕೊವೈಟ್‌ನಂತಹ ಕೊಲ್ಲಿ ದೇಶದಲ್ಲಿಯೂ ಹಿಂದೂ ಸಂಸ್ಕೃತಿಯ ಚಿತ್ರಗಳು ದೊರೆಯುತ್ತವೆ. ಯೆಮೆನ್ ದೇಶವು ಹನುಮಂತನು ದ್ರೋಣಗಿರಿ ಎತ್ತಿರುವ ಚಿತ್ರ ಮುದ್ರಿಸಿದೆ. ಅಜಂತ, ಎಲ್ಲೋರ ಮತ್ತು ತಾಜ್‌ಮಹಲ್‌ಗಳ ಚಿತ್ರಗಳನ್ನೂ ಮುದ್ರಿಸಿದ್ದಾರೆ.

ಹೀಗೆ ವಿಶ್ವದ ನಾನಾ ಭಾಗಗಳಲ್ಲಿ ಕಂಡು ಬಂದಿರುವ ಭಾರತದ ಪ್ರತಿಷ್ಠೆಗಳಾದ ಸಂಸ್ಕೃತ ಹಾಗೂ ಸಂಸ್ಕೃತಿಗಳ ಈ ಕಿರು ಪರಿಚಯ ಸೋ. ನಾ. ಭಟ್ಟರ ಮೂಲಕ ಲಭ್ಯವಾಗಿದೆ.

---

## ವಚನ

ಎನ್ನ ಹೃದಯಕಮಲದಲ್ಲಿ ಮೂರ್ತಿಗೊಂಡಿಪ್ಪ ಎನ್ನ ಪ್ರಾಣೇಶ್ವರಂಗೆ ಎನ್ನ ಕ್ಷಮೆಯೇ ಅಭಿಷೇಕ. ಎನ್ನ ಪರಮವೈರಾಗ್ಯವೇ ಪುಷ್ಪದ ಮಾಲೆ. ಎನ್ನ ಸಮಾಧಿ ಸಂಪತ್ತೇ ಗಂಧ. ಎನ್ನ ನಿರಹಂಕಾರವೇ ಅಕ್ಷತೆ. ಎನ್ನ ಸದ್ವಿವೇಕವೇ ವಸ್ತ್ರ. ಎನ್ನ ಸತ್ಯವೇ ದಿವ್ಯಾಭರಣ. ಎನ್ನ ವಿಶ್ವಾಸವೇ ಧೂಪ. ಎನ್ನ ದಿವ್ಯ ಜ್ಞಾನವೇ ದೀಪ. ಎನ್ನ ನಿಭ್ರಾಂತಿಯೇ ನೈವೇದ್ಯ. ಎನ್ನ ನಿರ್ವಿಷಯುವೇ ತಾಂಬೂಲ. ಎನ್ನ ಮೌನವೇ ಘಂಟೆ. ಎನ್ನ ನಿರ್ವಿಕಲ್ಪನೆಯೇ ಪ್ರದಕ್ಷಿಣೆ. ಎನ್ನ ಶುದ್ಧಿಯೇ ನಮಸ್ಕಾರ. ಎನ್ನ ಅಂತಃಕರಣದಿಂದ ಮಾಡುವ ಸೇವೆಯೇ ಉಪಚಾರಂಗಳು. ಈ ಪರಿಯಲ್ಲಿ ಎಮ್ಮ ಗೊಹೇಶ್ವರ ಲಿಂಗಕ್ಕೆ ಪ್ರಾಣಪೂಜೆಯ ಮಾಡಿ ಬಾಹ್ಯಕ್ರಿಯ ಮರೆದೆನು ಕಾಣಾ ಸಂಗನ ಬಸವಣ್ಣ.

# ವ್ಯಕ್ತಿ ನಿರ್ಮಾಣಕ್ಕೆ ಪ್ರತಿಬಂಧಕವಾಗಿರುವ ಶಿಕ್ಷಣ

● ಅರೆಯೂರು ನರಸಿಂಹಮೂರ್ತಿ, ಪ್ರ. ಶಿಕ್ಷಕರು, ಸಿದ್ಧಗಂಗಾ ಶಿಕ್ಷಕ ತರಬೇತಿ ಸಂಸ್ಥೆ,
ಬಿ. ಹೆಚ್. ರಸ್ತೆ, ತುಮಕೂರು-2

ಈ ಹಿಂದೆ ವ್ಯಕ್ತಿಯಲ್ಲಿ ಅಂತರ್ಗತವಾಗಿರುವ ವಿವಿಧ ಬಗೆಯ ಶಕ್ತಿಗಳ ಬಗ್ಗೆ
ವಿಚಾರ ಮಾಡಲಾಗಿತ್ತು. ಶಿಕ್ಷಣ ಕ್ಷೇತ್ರದಲ್ಲಿ ಇವುಗಳ ಪಾತ್ರ ಕೇವಲ ವಿದ್ಯಾರ್ಥಿ-
ಗಳಿಗೇಕೆ ಶಿಕ್ಷಕರಲ್ಲಿರಬೇಕೆಂಬುದನ್ನು. ತಿಳಿಸಲಾಗಿತ್ತು ವ್ಯಕ್ತಿಯಲ್ಲಿನ ಮಾನಸಿಕ ಸ್ಥಿತಿ-
ಗತಿಗಳೇ ಪ್ರತಿಯೊಂದಕ್ಕೂ ಕಾರಣ ಎಂಬುದನ್ನು ತಿಳಿಯಬಹುದೆಂಬ ಅಂಶ ಮನ
ಗಾಣಲಾಗಿತ್ತು. ಮನಸ್ಸಿಗೆ ಎರಡು ಮುಖಗಳಾದ ಚೇತನ ಮತ್ತು ಸಂಸ್ಕಾರದ
ಪಾತ್ರ ಯಾವ ರೀತಿ ಪರಿಣಾಮ ಉಂಟುಮಾಡಬಲ್ಲದೆಂಬುದನ್ನು ಮುಂದೆ ತಿಳಿಯ
ಬೇಕಾಗಿದೆ.

ಮುಂದೆ "ತ್ಯಾಗ" ಮತ್ತು "ಸೇವಾಮನೋಭಾವ" ಇವು ವ್ಯಕ್ತಿ ನಿರ್ಮಾಣದಲ್ಲಿ
ಯಾವ ಪಾತ್ರವಹಿಸುತ್ತವೆ ಎಂಬುದನ್ನು ಗಮನಿಸೋಣ. ಈ ಪದಗಳು ಹೇಳಲು
ಬಹಳ ಸರಳವಾದವುಗಳು. ಆಚರಿಸಲು ಅತಿಕಷ್ಟ. ಉಪನಿಷತ್ತಿನ ವಾಕ್ಯಗಳು
ತ್ಯಾಗದ ಬಗ್ಗೆ ಹೇಳಿರುವುದೇನು ?

ನಕರ್ಮಣಾ ನಪ್ರಜಯಾ ಧನೇನ ತ್ಯಾಗೇ ನೈಕೇ ಅಮೃತತ್ವಮಾನಶುಃ ।
ಪರೇಣನಾಕಂ ನಿಹಿತಂ ಗುಹಾಯಾಂ ವಿಭ್ರಾಜದೇತತ್ ಯತಯೋ ವಿಶಂತಿ॥

ತ್ಯಾಗ ಎಂಬುದು ಒಂದು ಅಂತರಂಗದ ಸಾಧನ. ಅಗ್ನಿ ಹೋತ್ರದಿಂದ ಆರಂಭಿಸಿ
ಒಂದು ಸಾವಿರ ವರ್ಷಗಳ ಕಾಲ ಅನುಷ್ಠಾನ ಮಾಡುವಂತಹ ವೈದಿಕ ಕರ್ಮಗಳೇನಿ
ದೆಯೋ ಅವುಗಳಾವುದರಿಂದಲೂ ಅಮೃತತ್ವ ಸಿಗುವುದಿಲ್ಲ. ಪಿತೃಋಣವನ್ನು ತೀರಿಸಲು
ಪ್ರಜಾಸಂತತಿ ಏನಿದೆಯೋ ಅವುಗಳಿಂದಲೂ ಅಮೃತತ್ವ ದೊರೆಯುವುದಿಲ್ಲ. ಬಹು
ವಿಧವಾದ ಫಲಗಳಿಗೆ ಸಾಧನವಾಗಿರುವ ಧನದಾನವೆಂಬ ಕರ್ಮಗಳಿಂದಲೂ ಅಮೃತತ್ವ
ಸಿಗುವುದಿಲ್ಲ. ಹಾಗಿದ್ದಲ್ಲಿ ಇದು ದೊರೆಯುವ ಬಗೆ ಹೇಗೆ? ಕೆಲವರು ಮಾತ್ರ ಈ
ಅಮೃತತ್ವವನ್ನು "ತ್ಯಾಗ" ದಿಂದ ಪಡೆಯುತ್ತಾರೆ. ಇದು ಆಯಾ ಸಾಧಕನ
ಏಕಾಗ್ರ ಬುದ್ಧಿಯಿಂದ ಮತ್ತು ಆದರ ಸಾಧನದಿಂದ ಕಂಡುಕೊಳ್ಳಬೇಕಾಗಿದ್ದು ಅವರ
ವರ ಹೃದಯುದಲ್ಲಿರುವ ಒಂದು ಗುಹೆಯಲ್ಲಿ ಅಡಗಿರುತ್ತದೆ. ಅಂತರ್ಮುಖ ಸಾಧಕರಿಗೆ
ಇದು ಚೆನ್ನಾಗಿ ಅನುಭವಕ್ಕೆ ಬರುತ್ತದೆ. ಬಹಿರ್ಮುಖಿಗಳಿಗೆ ಅದರ ಲಭ್ಯವಿಲ್ಲ ವೆಂಬು
ದನ್ನು ಬಸವಣ್ಣನವರೇ ತಿಳಿಸಿರುತ್ತಾರೆ. ಯಾವುದೇ ವ್ಯಕ್ತಿ ಅಂತರ್ಮುಖ ಭಾವನೆಗೆ
ಹೆಚ್ಚು ಒತ್ತುಕೊಡಬೇಕು. ಇದನ್ನೇ ಕಾಯಕ ರೂಪದಲ್ಲಿ ಕಾಣುತ್ತೇವೆ.



ಸೇವೆ ಮತ್ತು ತ್ಯಾಗ ಎಂಬ ಪದಗಳು (Service and Sacrifice
ಒಂದೇ ನಾಣ್ಯದ ಎರಡು ಮುಖಗಳಿರುವಂತೆ ಒಂದೇ ಜಗತ್ತಿನ ಎರಡು ವ್ಯಾಪಾರಗಳು.
ತ್ಯಾಗ ಎಂಬ ಪದವು ವಿಶಾಲಾರ್ಥ ಕೊಡುತ್ತದೆ. ಹೊರಗಿನ ಜಗತ್ತಿಗೆ ಸೇವೆ ಮಾಡು
ತ್ತಿರುವುದು ತಿಳಿಯಬಂದರೂ ಅದು ತ್ಯಾಗ ರೂಪದಲ್ಲಿ ಹೊರಗೆ ಬರುವುದಲ್ಲ.

**ನಿಜವಾದ ತ್ಯಾಗದ ಮಹಿಮೆ :–** ಸ್ವಾಮಿ ವಿವೇಕಾನಂದರ ತಮ್ಮ Comp-
lete works of Vivekananda ಎಂಬ ಗ್ರಂಥಗಳಲ್ಲಿ Education
ಎಂಬ ಭಾಗದಲ್ಲಿ ಕಂಡ ಕಥೆಯರೂಪದ ದೃಷ್ಟಾಂತ ಈ ರೀತಿ ಇತ್ತು. ಕುರುಕ್ಷೇತ್ರ
ಯುದ್ಧ ಪೂರೈಸಿತ್ತು. ಪಾಂಡವರು ಒಟ್ಟಾಗಿ ಸೇರಿ ತಮ್ಮ ಹಿಂದಿನ ಕಷ್ಟಸುಖ
ಮತ್ತು ಪಾಪ-ಪುಣ್ಯಗಳ ಪರಿಹಾರಾರ್ಥವಾಗಿ ಒಂದು ಯಜ್ಞ ನಡೆಸಬೇಕೆಂದು
ತೀರ್ಮಾನಿಸಿದರು. ಆ ಸಂದರ್ಭದಲ್ಲಿ ಯಥೇಚ್ಛವಾಗಿ ದಾನ ಧರ್ಮ ಮಾಡುವ
ವ್ಯವಸ್ಥೆ ಮಾಡಿಕೊಂಡಿದ್ದರು. ಅದೇರೀತಿ ನಡೆಸಿದರು. ಜನರ ಅಭಿಪ್ರಾಯದಂತೆ
ಎಂದೆಂದೂ ಕಾಣದಂತಹ ಸನ್ನಿವೇಶ ಎಂದು ಹೇಳಲಾಗಿತ್ತು. ಆ ಸಂದರ್ಭದಲ್ಲಿ
ಒಂದು ಮುಂಗುಸಿ ಆ ಯಾಗ ಶಾಲೆಗೆ ಪ್ರವೇಶಿಸಿತು. ವಿಚಿತ್ರವಾಗಿತ್ತು. ಅರ್ಧ
ಭಾಗ ಹೊಂಬಣ್ಣ ಉಳಿದರ್ಧಭಾಗ ತನ್ನ ಮೊದಲಿನ ಬಣ್ಣವಾಗಿತ್ತು. ಅದಕ್ಕೆ ಚಿಂತೆ
ಬಂದಿತ್ತು. ಎರಡು ರೀತಿಯ ಬಣ್ಣ ಅದಕ್ಕೆ ಬೇಸರವಾಯಿತು. ಅದರ ಪ್ರಕಾರ, ಎಲ್ಲ
ಧರ್ಮಿಷ್ಟರು ನಡೆಸುವ ಕಾರ್ಯದಲ್ಲಿ ಪಾಲ್ಗೊಂಡು ಭೂಮಿಯಲ್ಲಿ ಹೊರಳಾಡಿದರೆ
ಅದೂ ಸಹ ಚಿನ್ನದಂತೆ ಆಗಬಹುದೆಂಬ ಕಲ್ಪನೆಯಿಂದ ಆ ಸ್ಥಳದಲ್ಲಿ ಹೊರಳಾಡುತ್ತಾ
ಹೇಳಿತು. ಇಲ್ಲಿಯೂ ಸಹ ಯಾವ ತ್ಯಾಗ ಮನೋಭಾವವುಳ್ಳ ವ್ಯಕ್ತಿಗಳನ್ನು ಕಾಣ
ಲಾರೆ ಎಂದು. ಇದಕ್ಕೆ ಕಾರಣ ಅದೇ ಹೇಳಿತು.

**ಅದರ ಬಣ್ಣದ ವಿಭಿನ್ನತೆಗೆ ಕಾರಣ:–** ಒಂದು ಹಳ್ಳಿಯಲ್ಲಿ ಒಂದು ಬಡ ಕುಟುಂಬ
ವಿತ್ತು. ನಾಲ್ಕು ಜನರಿದ್ದರು. ಗಂಡ ಹೆಂಡತಿ, ಮಗ-ಸೊಸೆ. ಯಜಮಾನ ಜ್ಞಾನಿ.
ಬೋಧನೆಯೇ ಆತನ ವೃತ್ತಿ. ಭಿಕ್ಷೆಯ ರೂಪದ ಸಂಪಾದನೆ ಮೂರುವರ್ಷಗಳ
ಕಾಲ ಕ್ಷಾಮ ಒದಗಿತ್ತು. ಅಂದಂದಿನ ಜೀವನ ಅಂದಂದಿನ ಸಂಪಾದನೆ. ಗಂಜಿ
ಗಾಗುವಷ್ಟು ಮಾರ್ಗ. ಒಮ್ಮೆ ನಾಲ್ವರೂ ಅಂದಿನ ಆಹಾರವನ್ನು ಹಂಚಿಕೊಂಡು
ತಟ್ಟೆಯಲ್ಲಿಟ್ಟು ಊಟಮಾಡಲು ಪ್ರಾರಂಭಿಸಿದ್ದಾರೆ. ಆ ಸಮಯಕ್ಕೆ ಒಬ್ಬ ಹಸಿವಿ
ನಿಂದ ಬಳಲುತ್ತಿದ್ದ ಬ್ರಾಹ್ಮಣ ಬಂದನು. ಹಸಿವು! ಊಟ! ಸಾಯುತ್ತಿದ್ದೇನೆ ಆತ
ನಿಂದ ವಾಕ್ಯಗಳು. ಯಜಮಾನನು ತನ್ನ ಭಾಗದ ಆಹಾರ ಆತನಿಗೆಕೊಟ್ಟನು. ಸೇವಿ
ಸಿದ ವ್ಯಕ್ತಿ ಹೇಳಿದಮಾತು ನನ್ನ ಹಸಿವು ಹೆಚ್ಚಾಗುತ್ತಿದೆ. ಮನೆಯ ಒಡತಿ ಗಂಡನ
ಅಪ್ಪಣೆ ಮೇರೆಗೆ ತನ್ನ ಪಾಲಿನದನ್ನು ಕೊಟ್ಟಳು. ಆದರೂ ಹಸಿವು ಇಂಗಲಿಲ್ಲ. ಅತಿಥಿ
ಯಿಂದ ಬಂದ ಉತ್ತರ. ನಂತರ ಸರದಿಯಂತೆ ಹಿರಿಮಗನುಪಾಲನ್ನು ಕೊಟ್ಟನು.
ತೃಪ್ತಿ ಪಡದ ಅತಿಥಿಯು ನಾಲ್ಕು ಜನರ ಪಾಲನ್ನು ಸೇವಿಸಿ ಹೊರಡಲನುವಾದನು.

**ಅಸಮಾಧಾನ ಪ್ರಸಂಗ :-** ಏನನ್ನೂ ಹೇಳದೆ ಹೊರಟ ಅತಿಥಿಯನ್ನು ಗಮನಿಸಿದ ಮನೆಯ ಯಜಮಾನನಿಗೆ ಧರ್ಮ ಸಂಕಟಕ್ಕೆ ಸಿಲುಕಿದಂತಾಯಿತು. ನಾಲ್ವರು ಹಸಿದ ವ್ಯಕ್ತಿಗಳು ಮತ್ತು ತೃಪ್ತಿ ಪಡಿಸದೆ ಇರುವುದು. ಆ ಸಂದರ್ಭದಲ್ಲಿ ಮುಂಗುಸಿ, ಆ ಮನೆಗೆ ನಾನು ಹೋಗಿದ್ದೆ ಎಂದು ಹೇಳಿತು. ಅವರು ಆಹಾರ ಸೇವಿಸಿದ ಸ್ಥಳದಲ್ಲಿ ಕೆಲವು ಧಾನ್ಯದ ಹಿಟ್ಟು ಇತ್ತು, ಶರೀರಕ್ಕೆ ಎಷ್ಟು ಹತ್ತಿಕೊಂಡಿತ್ತೋ ಅಷ್ಟೇ ಭಾಗ ಚಿನ್ನದಂತಾಯಿತು. ಉಳಿದ ಭಾಗ ಇದ್ದಂತೆಯೇ ಇದೆ. ಇದನ್ನು ಇಲ್ಲಿ ಪರೀಕ್ಷಿಸುವ ಸಲುವಾಗಿ ಬಂದೆ ಆಗಲಿಲ್ಲ ಪಾದ್ದರಿಂದ ನಿಜವಾದ "ತ್ಯಾಗ" ಎಂಬ ಪದದ ಅರ್ಥ ವಿರಲಿ ಈ ಪಾಂಡವರಿಂದಲೂ ಕಾಣಲಿಲ್ಲ ಎಂಬುದನ್ನು ವ್ಯಕ್ತ ಪಡಿಸಿತು.

ಇಲ್ಲಿ ನಾವು ತ್ಯಾಗ ಭಾವನೆಯು ಸೇವೆ ಮತ್ತು ಕರ್ತವ್ಯದೊಡನೆ ಯಾವ ರೀತಿ ಹೊಂದಿಕೊಂಡಿದೆ ಎಂಬುದನ್ನು ಗಮನಿಸಬೇಕು.

**ಇಂದು ನಾವು ಕಾಣುತ್ತಿರುವುದು :-** ಯಾಂತ್ರಿಕವಾದ ಬೋಧನೆ, ಯಾಂತ್ರಿಕ ಕಲಿಕೆ, ನಕಲಿ ಸರ್ಟಿಫಿಕೇಟ್‌ಗಳನ್ನು ಪಡೆಯುವುದು, ಸರಿಯೋ-ತಪ್ಪೋ ಸಂಪಾದನೆಯ ಮಾರ್ಗ ಹುಡುಕುವುದರಲ್ಲಿ ಪರಿತಪಿಸುತ್ತಿದ್ದೇವೆ. ಶಿಕ್ಷಣ ಕ್ಷೇತ್ರದಲ್ಲಿ ಎಲ್ಲಿಲ್ಲದ ಅನ್ಯಾಯ ನಡೆಯುತ್ತಿದೆ. ಅವರವರ ಕರ್ತವ್ಯಗಳನ್ನು ಅವರವರು ಸೇವಾಮನೋಭಾವದಿಂದ ಮಾಡಿದ್ದೇ ಆದರೆ ಯಾವುದೇ ರೀತಿಯ ದುರ್ಘಟನೆಗಳಿಗೆ ಕಾರಣ ವಿರುವುದಿಲ್ಲ. ಈ ಪ್ರಸಂಗವನ್ನು ಗಮನಿಸಿದಾಗ ನಮ್ಮ ಸಂಸ್ಥೆಯ ಸಂಸ್ಥಾಪಕರೂ, ದಾಸೋಹಿಗಳೂ ಆಗಿರುವ ಶ್ರೀ ಶ್ರೀ ಗಳವರನ್ನು ನಿಜವಾದ ತ್ಯಾಗ ಮನೋಭಾವವುಳ್ಳ ವ್ಯಕ್ತಿಗಳೆಂದು ದೃಢಪಡಿಸಿಕೊಳ್ಳಬಹುದಲ್ಲವೆ! ಯಾವುದೇ ಕಲಾಪಗಳಿಗೆ ಕಿಂಚಿತ್ತು ಲೋಪ ಮಾಡದೆ ತಮ್ಮ ಕಾಯಕವನ್ನು ನಡೆಸಿಕೊಂಡು ಬರುತ್ತಿರುವುದರಿಂದಲ್ಲವೆ ಇಂದು ಸಾವಿರಾರು ವಿದ್ಯಾರ್ಥಿಗಳು ನಿರ್ಭಯವಾಗಿ ವಿದ್ಯಾಭ್ಯಾಸ ನಡೆಸುತ್ತಿರುವುದು. ನಮ್ಮಂತಹ ಸಾಮಾನ್ಯರು ಇದನ್ನು ಅರ್ಥಮಾಡಿಕೊಂಡು ನಮ್ಮ ಸೇವೆಯಲ್ಲಿ ಆನಂದ ಕಂಡಾಗ ಅಂತಹ ತಪಸ್ವಿಗಳಿಗೆ ಆನಂದ ಉಂಟಾಗುವುದಲ್ಲದೆ ನಮ್ಮ ಶ್ರೇಯಸ್ಸಿಗೂ ಕಾರಣರಾಗುತ್ತಾರೆ. ಸ್ವಾಮಿ ವಿವೇಕಾನಂದರು ಹೇಳಿರುವಂತೆ

"Karma-Yoga means, even at the point of death to help any one, without asking questins, Be cheated millions of times and never ask a question, and never think of what you are doing. Never Vaunt of your gifts to the poor or expect their gratitude, but rather be greatful to them for giving you the occasion of practing Charity to them"



# ಸೌಂದರ್ಯವೇ ನೀತಿ, ಸಾಮರಸ್ಯವೇ ಆನಂದ

ಶಂಕರ ಪಾಟೀಲ, ಕಲಾಭವನ, ವಿದ್ಯಾನಗರ, ದಾವಣಗೆರೆ-577005.

ಸೌಂದರ್ಯ ಶಾಸ್ತ್ರವೇ ನೀತಿಶಾಸ್ತ್ರ ಅಥವಾ ಧರ್ಮಸಿದ್ಧಾಂತ ಆಗಬಹುದಾಗಿದೆ. ಸೌಂದರ್ಯ ಸತ್ಯವನ್ನು ಕಂಡುಕೊಳ್ಳುವ ಸಾಧನವಾಗಿದೆ. ಸೃಷ್ಟಿಯಲ್ಲಿಯ ವಸ್ತುಗಳಲ್ಲಿ ನಾವು ಸೌಂದರ್ಯವನ್ನು ಕಾಣುತ್ತೇವೆ. ಚಿತ್ರಕಲಾವಿದನಾದವನು ಸೌಂದರ್ಯವನ್ನು ಸೃಷ್ಟಿಸುತ್ತಾನೆ. ಸುಂದರ ವಸ್ತುಗಳನ್ನು ಸೃಷ್ಟಿಮಾಡಬಲ್ಲ ವ್ಯಕ್ತಿ ಸುಂದರ ಜೀವನವನ್ನು ಮಾಡಬಲ್ಲಂಥವನಾಗಿರುತ್ತಾನೆ. ನೀತಿವಂತನೂ ಆಗಿರುತ್ತಾನೆ. ನಿಜವಾದ ಸೌಂದರ್ಯ ಪ್ರಜ್ಞೆ ಮಾನವನಿಗೆ ಸಹಜವಾಗಿ ನೈತಿಕ ಪ್ರಜ್ಞೆಯನ್ನು ಒದಗಿಸುವ ಗುಣವನ್ನು ಹೊಂದಿರುತ್ತದೆ. ಅದಕ್ಕಾಗಿ ಅವನು ಯಾವ ನಿಯಮಗಳನ್ನು ಪಾಲಿಸುವ ಅಥವಾ ರೂಢಿಸಿಕೊಳ್ಳುವ ಅವಶ್ಯಕತೆ ಇರುವುದಿಲ್ಲ. ಅವನು ಯಾರನ್ನು ಕೊಲ್ಲುವ ವಿಚಾರ ಮಾಡಲಾರ. ಯಾಕೆಂದರೆ ಹಿಂಸೆ ಸುಂದರವಾದ ಕ್ರಿಯೆ ಅಲ್ಲ ಎನ್ನುವುದು ಅವನ ಸಹಜ ಗುಣಧರ್ಮ ಆಗಿರುತ್ತದೆ. ಒಬ್ಬ ಕೊಲೆಗಾರ ಬೇರೆಯವರನ್ನು ಸಾಯಿಸುತ್ತಾನೆ. ಒಬ್ಬ ಸನ್ಯಾಸಿ ತನ್ನನ್ನು ತಾನೆ ಸಾಯಿಸಿಕೊಳ್ಳುತ್ತಾನೆ. ಹಾಗಾಗಿ ಇಬ್ಬರೂ ಉಗ್ರವಾದ ಆವೇಶಕ್ಕೆ ಒಳಗಾಗುವ ಹಿಂಸಾತ್ಮಕ ಸ್ವಭಾವದವರಾಗಿರುತ್ತಾರೆ ಎಂದೇ ಹೇಳಬಹುದು. ಒಬ್ಬ ಇನ್ನೊಬ್ಬನ ಮೇಲೆ ಬಲಾತ್ಕಾರ ಮಾಡಿದರೆ ಮತ್ತೊಬ್ಬ ತನ್ನ ಮೇಲೆ ತಾನೇ ಬಲಾತ್ಕಾರ ಮಾಡಿಕೊಳ್ಳುವ ಸ್ವಭಾವದವನಾಗಿರುತ್ತಾನೆ. ಆದರೆ ಸೌಂದರ್ಯ ಪ್ರಜ್ಞೆ ಉಳ್ಳವನು ಕಲಾನುಭವ ಪಡೆದವನು ಬಲಾತ್ಕಾರ, ಮೋಸ ಹಾಗೂ ಅಪ್ರಾಮಾಣಿಕತೆಯಿಂದ ದೂರವಾಗಿರುವ ಸಹಜ ಗುಣವನ್ನು ಹೊಂದಿರುತ್ತಾನೆ. ಯಾಕೆಂದರೆ ದುಷ್ಟಗುಣಗಳು ಅವನಿಗೆ ಕುರೂಪವಾಗಿಯೂ ಭಯಾನಕವಾಗಿಯೂ ಕಾಣುತ್ತವೆ.

ಕಲಾವಿದ ತನ್ನ ಚಿತ್ರಗಳನ್ನು ಮಾರುತ್ತಾನೆ. ಆದರೆ ಅವನು ತನ್ನ ಕಲೆಯನ್ನು ಮಾರುವುದಿಲ್ಲ. ಚಿತ್ರ ಒಂದು ವಸ್ತು ಆದರ ಕಲೆಯನ್ನಾಗಲಿ ಧರ್ಮವನ್ನಾಗಲಿ ಅಧೀನಪಡಿಸಿಕೊಳ್ಳಲು ಬಾರದು. ಬೈಬಲ್ಲನ್ನಾಗಲಿ ಗೀತೆಯನ್ನಾಗಲಿ ಇನ್ನಾವುದೇ ಧರ್ಮಗ್ರಂಥವನ್ನಾಗಲಿ ಓದಬಹುದು ತಿಳಿದುಕೊಳ್ಳಬಹುದು. ಆದರೆ ಧರ್ಮವನ್ನು ಓದುವುದಾಗಲಿ ತಿಳಿದುಕೊಳ್ಳುವದಾಗಲಿ ಆಗದು. ಅದನ್ನು ನಡವಳಿಕೆಯಲ್ಲಿ ತರಬೇಕಾಗುತ್ತದೆ. ಧರ್ಮವು ಕಲಿಯುವದಲ್ಲ ಕೇವಲ ತಿಳಿದುಕೊಳ್ಳುವದೂ ಅಲ್ಲ. ಅದು ಆಚರಣೆಯಲ್ಲಿ ತರುವಂಥದ್ದು. ಅದೇ ರೀತಿ ಕಲೆ ಕೂಡ.

ಒಂದು ಕಾವ್ಯ ಅದರಲ್ಲಿಯ ಎಲ್ಲಾ ಶಬ್ದಗಳಿಂದ ಕೂಡಿ ಆದರೂ ಅದು ಶಬ್ದಗಳಿಗಿಂತ ಮಿಗಿಲಾದ ಏನೋ ಒಂದನ್ನು ಹೊಂಹೊಮ್ಮುತ್ತದೆ. ಅದೇ ರೀತಿ ಚಿತ್ರ ಕೂಡ ಅದರಲ್ಲಿರುವ ವಸ್ತು ಹಾಗೂ ಬಣ್ಣಗಳಿಗಿಂತ ಹೆಚ್ಚಿನ ಯಾವುದೋ ಒಂದು

ದಿವ್ಯ ಸ್ವರೂಪದ ಸಾಕ್ಷಾತ್ಕಾರ ಮಾಡಿಸಬಲ್ಲದು. ಎರಡು ಸಾಲುಗಳ ಮಧ್ಯ ಕಾವ್ಯ ಇರುವಂತೆ ಶ್ವಾಸ-ಉಚ್ವಾಸ ಜೀವವಾಗಿರದೆ, ಅವೆರಡರ ಮಧ್ಯ ಇರುವುದೇ ಜೀವ. ಆದ್ದರಿಂದ ಇವೆರಡನ್ನೂ ಸಮತೋಲನ ಗೊಳಿಸಿದಲ್ಲಿ ಜೀವ ಲಯಬದ್ಧವಾಗಿ ಕ್ರಿಯೆಯಲ್ಲಿ ತೊಡಗುತ್ತದೆ. ಜೀವನದ ಸಾರ್ಥಕತೆ ದೂರದ ಧ್ರುವಗಳಲ್ಲಿರದೆ ಅವುಗಳ ಮಧ್ಯದ ಆಯಸ್ಕಾಂತ ಕ್ಷೇತ್ರದಲ್ಲಿದೆ. ಇದನ್ನೇ ಅನುಭಾವಿಗಳು ಸಾಮರಸ್ಯ ಎಂತಲೂ ಹೇಳುವರು. ವಸ್ತುಗಳು ಹಾಗೂ ಬಣ್ಣಗಳು ಸಾಮರಸ್ಯ ಪಡೆದಾಗ ಒಂದು ಚಿತ್ರವು ಹುಟ್ಟುವದು. ಒಬ್ಬ ಕಲಾವಿದನಿಂದ ಒಂದು ಚಿತ್ರ ರಚಿಸಲು ಬೇಕಾಗುವ ಬಣ್ಣಗಳನ್ನಾಗಲಿ ಕ್ಯಾನವಾಸನ್ನಾಗಲಿ ಯಾರೂ ಹಣಕೊಟ್ಟು ಕೊಂಡು ಕೊಳ್ಳುವುದಿಲ್ಲ. ಅವನು ಅವೆರಡನ್ನು ಉಪಯೋಗಿಸಿ ರಚಿಸಿದ ಚಿತ್ರನನ್ನು ಮಾತ್ರ ಕೊಂಡುಕೊಳ್ಳುತ್ತಾರೆ. ಆದ್ದರಿಂದ ಬೆಲೆ ಇರುವುದು ಕೇವಲ ಬಣ್ಣಗಳಿಗಲ್ಲ. ಅವುಗಳಿಂದ ಮೂಡಿಬಂದ ಸಾಮರಸ್ಯಕ್ಕೆ. ಅತ್ಯಂತ ಆನಂದ ಕಣ್ಣೀರನ್ನು ತರುತ್ತದೆ. ನಗುವನ್ನಲ್ಲ. ಆದರೆ ಸೌಮ್ಯವಾದ ನಗು ಯಾವಾಗಲು ಹಾಗೇ ನಗುವಾಗಿಯೇ ಉಳಿಯುತ್ತದೆ. ಆದ್ದರಿಂದ ಯಾವುದೇ ಅತಿಶಯೋಕ್ತಿಗಿಂತ ಸಮತೋಲನದ ಸಾಮರಸ್ಯ ಉತ್ತಮವಾದದ್ದು. ಅದಕ್ಕಾಗೇ ಈ ಸಾಮರಸ್ಯ ಹೊಂದಿರುವ ಕಲೆಗೆ ಒಳ್ಳೇ ಕಲೆ ಎಂದು ಹೇಳುವರು.

ಯಾವ ಪಾಪಕರ್ಮ ಮಾಡಿದವನಿಗೆ ನಾವು ಶಿಕ್ಷೆಕೊಡುವ ಅವಶ್ಯಕತೆ ಇಲ್ಲ. ಯಾಕೆಂದರೆ ಅವನ ಪಾಪವೇ ಅವನಿಗೆ ಶಿಕ್ಷೆಯಾಗಿ ಪರಿಣಮಿಸುತ್ತದೆ. ಒಬ್ಬ ಒಂದು ತಪ್ಪು ಕೆಲಸ ಮಾಡಿದಾಗ ಅವನಿಗೆ ದುಃಖವಾಗುತ್ತದೆ. ಯಾವನೋ ಕಾಡುತ್ತದೆ. ಮನಸ್ಸು ಯಾವಾಗಲೂ ಅಸಮಾಧಾನದಲ್ಲೇ ಉಳಿಯುತ್ತದೆ. ಪಾಪ ಪ್ರಜ್ಞೆ ಅವನು ಅನುಭವಿಸುವ ಶಿಕ್ಷೆಯಾಗಿ ಪರಿಣಮಿಸುತ್ತದೆ. ಅದೇ ಪಾಪಕರ್ಮದ ಲಕ್ಷಣ ಎಂದು ಹೇಳಬಹುದು. ಸುಖ ಇಲ್ಲದಂತಾಗುವುದೇ ಪಾಪ ಮಾಡುವುದು, ತಪ್ಪು ಮಾಡುವುದು ಎಂದರೆ ಒಬ್ಬ ವ್ಯಕ್ತಿ ಸೃಷ್ಟಿಯ ಲಯದಲ್ಲಿ ಬೆರೆಯಲು ಆಗದೇ ಹೋಗುವುದು ಎಂದೇ ಹೇಳಬಹುದು. ಮಾನಸಿಕ ಸಮತೋಲನವನ್ನು ಕಾಯ್ದುಕೊಳ್ಳುವುದೇ ಸೃಷ್ಟಿಯ ಸಾಮರಸ್ಯದಲ್ಲಿ ಉಳಿಯುವುದು ಎಂದೂ ಹೇಳಬಹುದು. ನಮ್ಮೆಲ್ಲ ಆನಂದಕ್ಕೆ ಈ ಸಾಮರಸ್ಯ ಕಾರಣವಾಗುವಂತೆ, ಸಾಮರಸ್ಯವನ್ನು ಹೊಂದಿದ ಚಿತ್ರ ವೀಕ್ಷಕನಲ್ಲಿ ಆನಂದದ ಭಾವವನ್ನು ತರುವ ಗುಣವನ್ನು ಹೊಂದಿರುತ್ತದೆ ಎಂದು ಹೇಳಬಹುದಾಗಿದೆ.

ಸೌಜನ್ಯ :- ಬಿತ್ತರ ಹಸ್ತ ಪ್ರತಿಶಾಸ್ತ್ರ ವಿಭಾಗ ಕನ್ನಡ ವಿಶ್ವವಿದ್ಯಾಲಯ
ಹಂಪಿ.



## ಗಾನಯೋಗಿ ಪಂಚಾಕ್ಷರಿ

ಮಹಾಂತೇಶಮಲ್ಲನಗೌಡ, ಬಾಲಕರ ಸರ್ಕಾರಿ ಕಾಲೇಜ್, ಕೊಪ್ಪಳ.

ಓ ಗಾನಯೋಗಿ ಪಂಚಾಕ್ಷರಿ, ನೀನಾಗಿದ್ದೆ ಸಂಗೀತದ ಸಾಗರ
ನಿನ್ನಯ ಧ್ವನಿಯು ಸಪ್ತಸ್ವರದ ಆಗರ. ನೀನೀ ಜಗದಿ ಅಮರ |ಪ|

ಇರದಿದ್ದರೇನಾಯಿತು ನಿನ ದೇಹಕೆ ನೇತ್ರ
ದಿವ್ಯವು ನೀ ಹೆಣೆದ ಸಂಗೀತದ ಸೂತ್ರ
ಭವ್ಯವು ನೀನು ಧರಿಸಿದ ಸಂಗೀತದ ಮಾಲೆ
ನಿನ್ನ ಹಿಂದೆ ಸಂಗೀತಗಾರರ ಸಾಲು ಸಾಲೆ |೧|

ಇಂದಿಗೂ ಜೀವಂತ ನಿನ ಸಂಗೀತ ಧಾರೆ
ಸಂಗೀತ ಆಕಾಶದಲಿ ನೀ ಮಿನುಗುವ ತಾರೆ
ನಿನ್ನಯ ನಾಮವೇ ಸಂಗೀತಕೆ ಸ್ಫೂರ್ತಿ
ನಿನಗಿದೆ ಎಲ್ಲೆಡೆ ಸಂಗೀತದ ಆರತಿ |೨|

ನೀ ಸ್ಥಾಪಿಸಿದ ವೀರೇಶ್ವರ ಪುಣ್ಯಾಶ್ರಮ
ಅಂಧರಿಗೆ ದೃಷ್ಟಿಕೊಡುವ ಸೃಷ್ಠಿಯ ಧಾಮ
ಪರಂಪರಾಗತವಾಗಿ ಹರಿಯುತಿದೆ ಸಂಗೀತದ ಹೊಳೆ -
ಪಿತಾಮಹನು ನೀನೆಂದು ಕರೆಯುತಿದೆ ಈ ಇಳೆ |೩|

ಸಂಗೀತವೆ ನಿನಗಾಗಿತ್ತು ಉಸಿರು
ಸಂಗೀತ ತೋಟವ ನೀ ಮಾಡಿದೆ ಹಸಿರು
ಆಶ್ರಮದಿಂದ ಬರುತಿದೆ ಶಿಷ್ಯರ ಸಾಲು
ನಿನ್ನ ನಾಮಬಲದಿಂದ ಎಲ್ಲರಿಗೂ ಮೇಲು

ಉಭಯಗಾನ ವಿಶಾರದ ನೀನೆನಿಸಿಕೊಂಡಿ
ಸಂಗೀತ ಶಾರದೆಯ ನೀನೊಲಿಸಿ ಕೊಂಡಿ
ಸೂರ್ಯ-ಚಂದ್ರರಂತೆ ಅನಂತ ನಿನ್ನಯ ಹಿರಿಮೆ
ಸ್ವರಗಳಲಿ ತುಂಬಿ ತುಳುಕುತಿದೆ ನಿನ್ನಯ ಮಹಿಮೆ |೪|

ಓ ಗಾನಯೋಗಿಯೇ ನಿನಗೆ ಸಹಸ್ರಾರು ನಮನ
ಸಂಗೀತ ತೋಟದಲಿ ನೀ ಬಾಡದ ಸುಮನ.

(ಶ್ರೀ ಮಹಾಂತೇಶಮಲ್ಲನಗೌಡ)

# ಲೋಕದ ಭವಿಷ್ಯ ಸಾರುವ ಹಕ್ಕಿ ನರಸಣ್ಣ

ಆರ್. ಜಿ. ಶ್ಯಾನಭಾಗ, ಶರಾವತಿ ಪ್ರೌಢಶಾಲೆ, ಹೊನ್ನಾವರ, ಹೊಸಾಡ

ಆಶಾವಾದಿಯಾದ ಮಾನವ ಭರವಸೆಯ ಬೆಳಕನ್ನು ಕಾಣಲು ಜ್ಯೋತಿಷ್ಯದ ನೆಳಲಿನಲ್ಲೇ ಸಾಗುತ್ತಾನೆ. ಈ ನಿಟ್ಟಿನಲ್ಲಿ ಹಕ್ಕಿ ನರಸಣ್ಣ ಎಂದರೆ ಬುಡ ಬುಡಕೆಯರು ಅವನಿಗೆ ಮಾರ್ಗದರ್ಶಕರು. ಕೇಳುವಾತನಿಗೆ ಭವಿಷ್ಯವನ್ನು ಹೇಳುವ ಜಾನಪದ ಹಕ್ಕಿ ನರಸಣ್ಣ ಇವನನ್ನು ಕರೆಯುವಪ್ರಾದೇಶಿಕ ಹೆಸರುಗಳೇ ಬೇರೆ ಬೇರೆ. ಬೆಳವಲ ಸೀಮೆ ಯಲ್ಲಿ ಗೂಳಿಗಾರನೆಂದೂ ಮಹಾರಾಷ್ಟ್ರದಲ್ಲಿ ಬುಡಬುಡಿಕೆಯೆಂದೂ ಹಾಗೂ ಕರಾವಳಿಯಲ್ಲಿ ಹಕ್ಕಿ ನರಸಣ್ಣ ಎಂದೂ ಈತನಿಗಿದ್ದ ರೂಢಿನಾಮಗಳು. ಗೊಂದಲಿಗ ಸಮಾಜಕ್ಕೆ ಸೇರಿದ ಈ ಸಂಚಾರಿ ಜೀವಿಗಳ ಉಲ್ಲೇಖ 1884 ರಲ್ಲಿ ಪ್ರಕಟಣೆಗೊಂಡ ಇಂಪೀರಿ-ಯಲ್ ಗೆಜೆಟಿಯರದಲ್ಲಿ ಕಾಣುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಬುಡಬುಡಕೆ-ಯರ ಕುರಿತಾದ ಕ್ರಮವನ್ನು ರಚಿಸಿದೆ.

ಬುಡಬುಡಿಕೆಯರು ಶಕ್ತಿ ಉಪಾಸಕರು. ಕುಳಜಾಪುರದ ಅಂಬಾಭವಾನಿ, ಕೊಲ್ಲಾಪುರದ ಮಹಾಲಕ್ಷ್ಮಿ ಹಾಗೂ ಮೈಸೂರ ಚಾಮುಂಡಿಯ ಆರಾಧಕರಾಗಿರುತ್ತಾರೆ ಅವರಲ್ಲಿ ಕೆಲವರು ತುಳಸಿ ಮಾಲೆಯನ್ನು ಧರಿಸಿ ಪಾಂಡುರಂಗನ ಹೆಸರಿನಲ್ಲಿ ವೈಕೋಪಾಸಕರಾಗುತ್ತಿದ್ದಾರೆ. ಹಿಪ್ಪರಗಿ, ಮುಂಡರಗಿ, ಗೋಕಾಕ, ಕಡಕೋಳ ಮತ್ತು ಹುಬ್ಬಳ್ಳಿಗಳಲ್ಲಿ ಶಕ್ತಿದೇವತೆಯರ ಗುಡಿಯನ್ನು ಕಟ್ಟಿರುವರು.

ಸಂಚಾರ ಕಾಲದಲ್ಲಿ ಊರ ಚಾವಡಿ, ಧರ್ಮಶಾಲೆ, ಗುಡಿಗುಂಡಾರ ಮತ್ತಿತರ ಈ ತೆರೆದ ಬಯಲುಗಳಲ್ಲಿ ಇವರ ತಂಗುದಾಣ. ಜೊತೆಗಾರ್ತಿಯಾಗಿ ಹೋಗುವ ಅವ ರಿಂದಲೆ ಕೇಳುಗಾರನಿಂದ ಹಣಸೆಳೆಯುವುದರಲ್ಲಿ ನಿಪುಣ ಅಶುಭ ಶಕುನಕ್ಕೆ ನೊಂದ ವನಿಂದ ಪರಿಹಾರೋಪಾಯವಾಗಿ ಕುರಿ, ಕೋಳಿ, ಬೆಳ್ಳಿ, ತಾಮ್ರ, ಇತ್ಯಾದಿ ದಾನ ಕೇಳುವನು. ಸ್ಮಶಾನದಲ್ಲಿ ಹೂಳಿದ ಬಾಣಂತಿಯಕ್ಕೆ ಇವನ ಕೈಯಲ್ಲಿರುವ ಮಂತ್ರ ದಂಡ ಇದು ಗಾಳಿ ಪಿಶಾಚಿ, ದೆವ್ವ ಬಿಡಿಸುವ ಮಂತ್ರದಂಡ ಬೆಸಗೊಂಬಾತನಿಗೆ ಪರಿಹಾರವಾಗಿ ನೀಡಲು, ತಾಯಿತ, ಉಂಗುರ, ಸದಾ ಕಿಸೆಯಲ್ಲಿರುತ್ತದೆ.

ಮಧ್ಯ ರಾತ್ರಿ ನಂತರ ಸ್ಮಶಾನ ಇರುವಲ್ಲಿ ಪಯಣಿಸುತ್ತಾನೆ. ಅಲ್ಲಿರುವ ಹಕ್ಕಿಗಳ ಚಿಲಿಪಿಲಿ ನುಡಿಯನ್ನು ಆಲಿಸುತ್ತಾನೆ, ಇದನ್ನು ಆಧರಿಸಿ ಜನರಿಗೆ ಭವಿಷ್ಯ ಹೇಳು-ವುದರಿಂದ ಹಕ್ಕಿನರಸಣ್ಣನಾಗಿದ್ದಾನೆ.

ಹಕ್ಕಿನರಸಣ್ಣನ ವೇಷ ಭೂಷಣ ಚಿತ್ತಾಕರ್ಷಕ ಧೋತರ ಅಂಗಿಯ ಮೇಲೆ ಉಣ್ಣೆಕೋಟು ತಲೆಗೆ ರುಮಾಲು ಧರಿಸುತ್ತಾನೆ. ಬಹುಮಾನ ಗಿಟ್ಟಿಸಿಕೊಂಡ ಬೆಡಗು ಅವನ ರುಮಾಲಿಗೆ ಶೃಂಗಾರ. ಪದಕ ಸರ, ತಾಯಿತಗಳಿಂದ ರುಮಾಲು ಸಾಲಂಕೃತ;

ಕೈ ಬೆರಳಿಗೆ ಉಂಗುರ ಕೊರಳ ಮೇಲಿಂದ ಇಳಿ ಬಿಟ್ಟ ಕೆಂಪು ಶಲ್ಯ ಎಡಬಗಲಲ್ಲಿ ಜೋಳಿ ಇರುವುದು, ಪಾದರಕ್ಷೆ ಧಾರಿ. ಹೆಗಲ ಮೇಲೆ ತೂಗುತ್ತಿರುವ ಬುಡಬುಡಿಕೆ ಚರ್ಮವಾದ್ಯ, ನೀಲಿ ಪುಸ್ತಕ ಬಾಣಂತಿಕ್ಕೆ ತಾಮ್ರದ ತಾಯಿತ ಕರಿದಾರ ಉಂಡಿ ವ್ಯಕ್ತಿ ಉಪಾಸನೆಗೆ ಬೇಕಿರುವ ಪರಿಕರಗಳ ನಿಟ್ಟುಕೊಳ್ಳುತ್ತಾನೆ ಹೆಂಡಂದಿರು ಬಾಂಡಿ-ಯನ್ನು ಮಾರುವವರು ಇಲ್ಲವೆ ಕೌದಿಯನ್ನು ಹೊಲೆಯುವವರು, ಗೋಕಾಕ, ರಾಮದುರ್ಗಾ, ಸಂಕೇಶ್ವರ, ಹುಕ್ಕೇರಿ, ನಿಪ್ಪಾಣಿ, ರಬಕವಿ, ಶಿವಮೊಗ್ಗಾ, ಶಿಕಾರಿಪುರ ಮತ್ತು ಪುತ್ತೂರ ಮುಂತಾದ ಕಡೆಗಳಲ್ಲಿ ಬಹುಸಂಖ್ಯೆಯಲ್ಲಿ ಇದ್ದಾರೆ. ಬೆಳಗಾವಿಯಲ್ಲಿ ಗೊಂದಳಿ ಎಂಬ ಇವರ ಓಣಿ ಇದೆ. ಇವರೆಲ್ಲ ಗೊಂದಲ ಸಮಾಜಕ್ಕೆ ಸೇರಿರುವುದರಿಂದ ಓಣಿಗೆ ಈ ಹೆಸರು ಬಂದಿದೆ.

ಇವರು ಧಾರಿಸುವ ಬುಡ ಬುಡಿಕೆ ಜಾನಪದ ವಾದ್ಯ. ಶಿವನ ಪವಿತ್ರವಾದನ ವಾದ, ಕಿರಿದಾದ ಡಮರು. ಹಕ್ಕಿನರಸಣ್ಣ ಸೂತಕವಾಗಿ ಬಾರಿಸುವಾಗ ಇದರಿಂದ ಬುಡ್ ಬುಡ್ ಕಿಡ್ ಕಿಡ್ ಎಂಬ ರಮ್ಯನಾದ ಹೊರಡಿಸುವುದರಿಂದ ಈ ವಾದ್ಯಕ್ಕೆ ಬುಡಬುಡ್‌ಕಿ ಇಲ್ಲವೆ ಕಿಡಬುಡ್‌ಕಿ ಎಂದು ಹೆಸರು ಬಂದಿದೆ. ನಾದ ಮಾಧುರ್ಯವೂ ಇವರ ಕರಕೌಶಲ್ಯ. ಹಾಡುವಾಗ ಮಾತನಾಡುವಾಗ, ಕಥೆ ಹೇಳುವಾಗ ಜನಮನ ಆಕರ್ಷಿಸುವಾಗ ಶೃತಿ, ಲಯ, ತಾಳ ಮೇಳಗಳನ್ನು ಸಂಯೋಜಿಸಿ ಬುಡಬುಡಿಕೆ ಬಾರಿಸುತ್ತಾರೆ.

**ಕಂಪ್ಯೂಟರ್ ಭವಿಷ್ಯ :–** ಸುಮಾರು 60 ಪುಟಗಳಿರುವ ನೀಲ ಪುಸ್ತಕ ಇವನ ಕೈಯ್ಯಲ್ಲಿರುತ್ತದೆ. ಭವಿಷ್ಯ ಹೇಳುವ ಕಂಪ್ಯೂಟರ್ ಇದೆನ್ನಬೇಕು. ಇಂದ್ರ ಚಂದ್ರ, ಲಿಂಗ, ಸಿಂಹ, ಹುಲಿ, ಬೆಕ್ಕು, ಶುಭ ಅಶುಭ ಚಿತ್ರಗಳು ಇದರಲ್ಲಿರುವವು. ಭವಿಷ್ಯ ಕೇಳಲು ಉತ್ಸುಕನಿರುವಾತಗೆ ತಾಮ್ರದ ಕಡ್ಡಿ ಪುಟದಲ್ಲಿ ಸೇರಿಸಬೇಕು ಬಂದ ಪುಟವನ್ನಾಧರಿಸಿ ಹಕ್ಕಿನರಸಣ್ಣ ಭವಿಷ್ಯ ಹೇಳುವನು, ಮಾತಿನ ಕೌಶಲ್ಯ.

ನಂಬಿಕೆ ಹುಟ್ಟಿಸುವ ಮಾತಿನ ಮೋಡಿ ಹಕ್ಕಿನರಸಣ್ಣನದು. ವ್ಯಕ್ತಿಯ ಜಾಯಮಾನಕ್ಕೆ ತಕ್ಕಂತೆ ಮಾತಿನ ಮೋಡಿ ಥಾಟ ಬದಲಾಯಿಸುತ್ತಾನೆ. ಅವಿವಾಹಿತೆಯರಿಗೆ ಕಂಕಣ ಬಲ ಕೂಡಿ ಬಂದೀತೆ ಎಂದರೆ ಜನಸಾಮಾನ್ಯರಿಗೆಲ್ಲ ಮನ ಮನ ಕೂಡಿದರೆ ಒಳ್ಳೆದಾಗೈತಿ ಎನ್ನುತ್ತಾನೆ. ಇವನದು ಭವಿಷ್ಯವನ್ನೇ ವೈಭವೀಕರಿಸಿ ಕಾಣಿಕೆಗಳನ್ನು ಸುಲಿಯುವುದರಲ್ಲಿ ಎತ್ತಿದ ಕೈ. ಜಯವಾಗ್ತೈತಿ, ಶುಭವಾಗ್ತೈತಿ ಎಂದು ಕೇಳಿದಾಗ ಎಂದೂ ಭವಿಷ್ಯ ಕೇಳದವನು ಕೇಳಬೇಕು. ಮಕ್ಕಳಿಲ್ಲದವರಿಗೆ ಸಂತಾನಪ್ರಾಪ್ತಿಯಾಗುವುದೆಂದು ಹೇಳುತ್ತಾನೆ. ಬಸುರಿಯರನ್ನು ಕಂಡರೆ ರತ್ನದಂಥ ಮಗ ಜನಿಸುತ್ತಾನೆ ಎನ್ನುತ್ತಾನೆ. ಲೈಂಗಿಕ ಶಕ್ತಿ ಹರಣಗೊಂಡವನಿಗೆ ಈತ ಜಾನಪದ ವೈದ್ಯ ಅದಕ್ಕಾಗಿ ವನಸ್ಪತಿ ಔಷಧ ಶಿಫಾರಸ್ಸು ಮಾಡುತ್ತಾನೆ. ಶುಭಹಾರೈಸಿ ಕೊನೆಗೊಂದು ಕೇಳುತ್ತಾನೆ. ಸೀರೆ ಇಲ್ಲನೆ, ಕೌದಿ ಆಡುಮಕ್ಕಳಾಗಲೀ ತೂಗು ತೊಟ್ಟಿಲಗಾಗಲೀ ಬಂಗಾರದ ಬಟ್ಟಲಾಗಲೀ ಪಾಂಡವರ ಬಳಗವಾಗಲೀ ಪಾಂಡುರಂಗನ ಕೃಪೆ ಕಾಪಾಡಲೆಂದು ಶುಭ ಹಾರೈಸುವನು.



ಕಿವಿಯಲ್ಲಿ ದೇವಿಮಂತ್ರದ ಬೋಧನೆ ಮೂಲಕ ಬುಡಬುಡಿಕೆಯರಿಗೆ ಹಿರಿಯರಿಂದ ವೃತ್ತಿ ದೀಕ್ಷೆ ದೊರಕುತ್ತದೆ. ಮಾತಿನ ವೈಖರಿ, ನಿಲ್ಲುವಭಂಗಿ, ಕಿರುಗಥೆ ಹಾಡುನುಡಿಗಟ್ಟು ಗಾದೆಮಾತು ಹರಕೆಯ ವಿಧಾನ ಮೊದಲಾದ ಬೋಧನೆ ಗುರುವಿನಿಂದಲೇಲಭ್ಯ

ಇತ್ತೀಚಿನ ದಿನಗಳಲ್ಲಿ ಬುಡ ಬುಡಕಿಯರು ತಿರುಕನೆಂಬ ಕೀಳರಿಮೆಯಿಂದ ನೋಡಲಾಗುತ್ತಿರುವುದು ಶೋಚನೀಯ. ಅವನು ಸಮಾಜದ ನಿಂದೆ ಬೈಗಳೆಲ್ಲವನ್ನೂ ಸಹಿಸಬೇಕಾಗಿದೆ. ಜನವೆಲ್ಲ ಕಂಪ್ಯೂಟರ್ ಜೋತಿಷ್ಯದತ್ತ ವಾಲುತ್ತಿದ್ದಾರೆ. ಬುಡ ಬುಡಿಕೆಯರ ವೃತ್ತಿಗೆ ಮರಣಾಂತಕ ಪೆಟ್ಟಾಗಿದೆ ಎಂದೇ ತಿರುಕನಂತೆ ಕಾಣಬಾರದೆಂದು ತಮ್ಮೆಲ್ಲ ಸಾಂಪ್ರದಾಯಿಕ ಪೋಷಾಕುಗಳನ್ನು ತ್ಯಜಿಸಿ ಸಾಮಾನ್ಯ ಜ್ಯೋತಿಷ್ಯದಿಗಿರುವ ಪೋಷಾಕುಗಳನ್ನು ಧರಿಸುತ್ತಿದ್ದಾರೆ. ಬುಡು ಬುಡಿಕೆಯರು ಪುಟಾಣಿಯರ ಗುಮ್ಮ ಎಂದು ಲಘುವಾಗಿ ಹೇಳಲ್ಪಟ್ಟಿದ್ದಾರೆ. ಇವರ ಬದುಕಿಗೆ ಬುಡತನಕ್ಕೆ ಬಡತನವಾಗುತ್ತಿದೆ. ಲೋಕದ ಭವಿಷ್ಯ ರೂಢಿಸುವ ಇವರಿಗೆ ತಮ್ಮ ಭವಿಷ್ಯ ರೂಪಿಸಲಾಗದಂತಾಗಿದೆ. ತಿರುಗಾಟದ ತಿರುಕರಿವರೆಂದು ಹೇಳಿಕೆ ದೂರವಾಗಬೇಕಾಗಿದೆ.

ಭಕ್ತಿಯ ಹರಿಕಾರ, ಹಾಗೂ ಜಾನಪದ ವೈದ್ಯರಾಗಿರುವ ಬುಡು ಬುಡುಕೆಯವರಿಗೆ ಸರಕಾರದಿಂದ ನೆರವು ದೊರಕಬೇಕಿದೆ. ಇದರಿಂದಾಗಿ ತಿರಸ್ಕಾರ ಪಡೆಯುತ್ತಿರುವ ಅವರ ವೃತ್ತಿಗೆ ಪುರಸ್ಕಾರ ದೊರಕಿದಂತಾಗುವುದಲ್ಲದೆ ಕಾಲದ ಜೊತೆಗೆಯೇ ಅವರ ವೃತ್ತಿ ಮುಂದುವರಿಯುವುದು.

---

## ಶ್ರದ್ಧಾಂಜಲಿ

**ಕೆ. ಎಸ್. ಬಸವಲಿಂಗಪ್ಪ** ಸ್ವಾತಂತ್ರ್ಯ ಹೋರಾಟಗಾರರು, ಜಯಲಕ್ಷ್ಮಿಪುರಂ, ಮೈಸೂರು. ಇವರು ಇತ್ತೀಚೆಗೆ ಶಿವೈಕ್ಯರಾದರು. ಪಾಂಡವಪುರ ತಾ॥ ಕ್ಯಾತನಹಳ್ಳಿ ಶ್ರೀಕಂಠಪ್ಪನವರ ಮಕ್ಕಳು ಉತ್ತಮ ದೀಮಂತವ್ಯಕ್ತಿಯಾಗಿ ಜನಪ್ರಿಯರಾಗಿದ್ದರು. ನ್ಯಾಯ, ಧೈರ್ಯ, ಛಲ ಮತ್ತು ಉತ್ಸಾಹಕ್ಕೆ ಪ್ರತೀಕವಾಗಿದ್ದರು.

ಬಾಲ್ಯದಿಂದಲೂ ಶ್ರೀ ಮಠದ ಸಂಪರ್ಕ ಹೊಂದಿ ಶ್ರೀ ಶ್ರೀಗಳವರಲ್ಲಿ ಅಚಲವಾದ ಭಕ್ತಿ, ನಿಷ್ಠೆವುಳ್ಳವರಾಗಿದ್ದರು. ಸದಾ ಶ್ರೀ ಶ್ರೀಗಳವರ ಅನುಗ್ರಹ ಆಶೀರ್ವಾದಗಳನ್ನು ಬೇಡುವ ಪ್ರವೃತ್ತಿ ಅವರದಾಗಿತ್ತು. ಶ್ರೀ ಮಠದ ಮಹಾ ದಾಸೋಹ ಮಣಿಹಕ್ಕೆ ತಮ್ಮ ಪ್ರದೇಶದಿಂದ ದವಸ ಧಾನ್ಯಗಳನ್ನು ಸಂಗ್ರಹಿಸಿ ಕಳುಹಿಸುವ ಕಾಯಕ ಕೈಗೊಂಡಿದ್ದರು. "ಸಿದ್ಧಗಂಗಾ" ಮಾಸ ಪತ್ರಿಕೆ ಮೈಸೂರು ನಗರ ಮತ್ತು ಗ್ರಾ. ಪ್ರದೇಶದಲ್ಲಿ ಬೆಳಕಿಗೆ ತರಲು ವಿಶೇಷವಾಗಿ ಶ್ರಮಿಸಿ ನೂರಾರು ಮಂದಿ ಆಜೀವ ಸದಸ್ಯರುಗಳನ್ನು ಮಾಡಿ ಸಹಕಾರ ನೀಡಿದ್ದಾರೆ. ಅವರ ಆತ್ಮಕ್ಕೆ ದಯಾಮಯರಾದ ಪಾರ್ವತಿ ಪರಮೇಶ್ವರರು ಚಿರ-ಶಾಂತಿಯನ್ನು ಕರುಣಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

## ಶ್ರದ್ಧಾಂಜಲಿ

ಮಲ್ಲಾಡಿಹಳ್ಳಿ ಅನಾಥ ಸೇವಾಶ್ರಮದ ತಪಸ್ವಿಗಳಾಗಿದ್ದ ಶ್ರೀ ರಾಘವೇಂದ್ರ ಸ್ವಾಮಿಗಳು ದಿನಾಂಕ 4-8-1996 ರಂದು ದಿವಂಗತರಾದುದನ್ನು ತಿಳಿದು ದುಃಖವಾಯಿತು.

ಸುದೀರ್ಘ ಸೇವಾ ಮಣಿಹವನ್ನು ನಡೆಸುತ್ತ ಬಂದು, 106 ವರ್ಷಗಳ ಜೀವನವನ್ನು ಮಾನವ ಕಲ್ಯಾಣಕ್ಕಾಗಿ ಮೀಸಲಿಟ್ಟು, ಆರೋಗ್ಯ, ಶಿಕ್ಷಣ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಶ್ರೀಗಂಧದಂತೆ ಸವೆದು "ತಿರುಕ" ಕಾವ್ಯನಾಮದಿಂದ ಸಾಹಿತ್ಯ ಕ್ಷೇತ್ರದಲ್ಲಿ ಹೆಸರುಗಳಿಸಿ, ಗ್ರಾಮೀಣ ಬಂಧು ಭಗಿನಿಯರ ಭಾಗ್ಯದೀಪವಾಗಿ ಬಾಳಬೆಳಗಿದ ಶ್ರೀಗಳವರ ತತ್ವ ಆದರ್ಶಗಳನ್ನು ಪಾಲಿಸಿಕೊಂಡು ಹೋಗುವುದೇ ಭಕ್ತಾದಿಗಳು, ಶಿಷ್ಯಸಮೂಹ, ಆಶ್ರಮವಾಸಿಗಳು ದಿವಂಗತರಿಗೆ

ಸರಳ ಜೀವನ, ಉನ್ನತ ಚಿಂತನದ ಮೂಲಕ ಜೋಳಿಗೆಯ ಬಲದಿಂದಲೇ ಆಶ್ರಮವನ್ನು ರೂಪಿಸಿ ವ್ಯಕ್ತಿಸಿದ್ಧಿ ಸಮಷ್ಟಿ ಕಲ್ಯಾಣದಲ್ಲಡಗಿದೆ ಎಂಬುದನ್ನು ಮೌನ ಸಂದೇಶದ ರೂಪದಲ್ಲಿ ನೀಡಿಹೋದ ಶ್ರೀಗಳ ಸೇವಾಜೀವನ ಒಂದು "ಯೋಗ" ವಾಗಿದೆ, ಆ ದಾರಿಯಲ್ಲಿ ಮುನ್ನಡೆಯುವುದು ಭಕ್ತಾದಿಗಳ ಕರ್ತವ್ಯವಾಗಿದೆ.

ದಿವಂಗತ ಶ್ರೀಗಳ ಆತ್ಮಕ್ಕೆ ದಯಾಮಯನಾದ ಭಗವಂತನು ಶಾಂತಿಯನ್ನು ಕರುಣಿಸಲೆಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

---



ಸಿ. ಶಿವರುದ್ರಪ್ಪ, ಎಲ್. ಸಿ. ಇ, ಕಂಟ್ರಾಕ್ಟರ್, ಬನಶಂಕರಿ, ಬೆಂಗಳೂರು ಇವರು 30 ಜುಲೈ 1996 ಬುಧವಾರ ಶಿವೈಕ್ಯರಾದರು. ಸರಳತೆ, ಸಜ್ಜನಿಕೆ ಮತ್ತು ಸಮಾನತೆಯಿಂದ ಎಲ್ಲರನ್ನೂ ಆದರಿಸುವ ವಿಶೇಷ ವ್ಯಕ್ತಿತ್ವದಿಂದ ಜನಾನುರಾಗಿಗಳಾಗಿದ್ದರು. ಬೆಂಗಳೂರಿನ ಕೆಲವು ಸಂಘ ಸಂಸ್ಥೆಗಳಲ್ಲಿ ಪಾಲ್ಗೊಂಡು ಸೇವೆ ಸಲ್ಲಿಸುತ್ತಿದ್ದರು.

ಶ್ರೀ ಮಠಕ್ಕೆ ಇವರ ಸಂಬಂಧ ಮೂರ ದಶಕಗಳಿಂದ ಬೆಳೆದು ಬಂದಿತ್ತು. ಶ್ರೀ ಶ್ರೀ ಗಳವರಲ್ಲಿ ಅಪಾರ ಶ್ರದ್ಧಾಭಕ್ತಿ ಉಳ್ಳವರಾಗಿದ್ದರು ಶ್ರೀ ಮಠದ ಎಲ್ಲಾ ಕಾರ್ಯಚಟುವಟಿಕೆಗಳಲ್ಲಿ ಉತ್ಸಾಹದಿಂದ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಇವರ ಕುಟುಂಬವರ್ಗಕ್ಕೆ ಅಗಲಿಕೆಯಿಂದ ಉಂಟಾದ ಶೋಕವನ್ನು ಸಹಿಸುವ ಶಕ್ತಿಯನ್ನು ಮತ್ತು ಆತ್ಮಕ್ಕೆ ಶಾಂತಿಯನ್ನು ಕರುಣಿಸಲಿ ಎಂದು ಬಸವಾದಿ ಪ್ರಮಥರನ್ನು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

" SIDDAGANGA MONTHLY Reg. No. KRNQ - 9

## ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
## ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.